

# "ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕಿನ ಪಾತ್ರ"

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ
ಎಂ.ಫಿಲ್ ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)


ಸಂಶೋಧಕರು

ಬಸವರಾಜ ಶರಣಪ್ಪಾ

ಸಂಶೋಧನ ಮಾರ್ಗದರ್ಶಕರು

ಡಾ॥ ಬಿರಾದಾರ ಶ್ರೀಶೈಲ

ಸ್ನಾತಕೋತ್ತರ ಸಂಶೋಧನಾ

ಅಧ್ಯಾಯನ ಕೇಂದ್ರ ಕ.ರಾ.ಶಿ. ಸಂಸ್ಥೆ

ಬೀದರ






ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ-೫೮೩.೨೭೬

ಸೆಪ್ಟೆಂಬರ-೨೦೦೯



# “ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕಿನ ಪಾತ್ರ”

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಎಂ.ಫಿಲ್.ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)



ಸಂಶೋಧಕರು

**ಬಸವರಾಜ. ಶರಣಪ್ಪಾ**



ಸಂಶೋಧನ ಮಾರ್ಗದರ್ಶಕರು

ಡಾ॥ ಬಿರಾದಾರ ಶ್ರೀಶೈಲ

ಸ್ನಾತಕೋತ್ತರ ಸಂಶೋಧನಾ

ಅಧ್ಯಾಯನ ಕೇಂದ್ರ ಕ.ರಾ.ಶಿ. ಸಂಸ್ಥೆ

ಬೀದರ



ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ-೫೮೩೨೭೬

ಸೆಪ್ಟೆಂಬರ-೨೦೦೯

# ಪರಿವಿಡಿ

# ಪ್ರಮಾಣ ಪತ್ರ

ಶ್ರೀ ಬಸವರಾಜ ಶರಣಪ್ಪಾ ಇವರು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ಕೈಗೊಂಡು "ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕಿನ ಪಾತ್ರ" ಎಂಬ ಪ್ರಬಂಧವನ್ನು ಎಂ.ಫಿಲ್.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇವರ ಮೂಲ ಪ್ರಬಂಧವಾಗಿದ್ದು, ಈ ಮೊದಲು ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ, ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸಲಾಗಿದೆ.

ಸ್ಥಳ : ಬೀದರ

ದಿನಾಂಕ: 29-09-09

ಡಾ. ಬಿರಾದಾರ ಶ್ರೀಶೈಲ

ಎಂ.ಎ, ಎಂ.ಫಿಲ್, ಪಿ.ಎಚ್.ಡಿ. ಎಸ.ಜಿ.ಎಲ್.

ಮಾರ್ಗದರ್ಶಕರು

ಕ.ರಾ.ಶಿ.ಸಂಸ್ಥೆಯ

ಸ್ನಾತಕೋತರ ಕನ್ನಡ ಸಂಶೋಧನಾ ಕೇಂದ್ರ ಬೀದರ

# ಘೋಷಣಾ ಪತ್ರ

**"ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕಿನ ಪಾತ್ರ"** ಎಂಬ ಪ್ರಬಂಧವನ್ನು ನಾನು **ಡಾ॥ ಬಿರಾದಾರ ಶ್ರೀಶೈಲ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು. ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಪ್ರಮಾಣಿಕರಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಾದರ ಪಡಿಸುತ್ತಿದ್ದೇನೆ.

ಸ್ಥಳ : ಬೀದರ

ದಿನಾಂಕ: 29.09.09.

**ಬಸವರಾಜ. ಶರಣಪ್ಪಾ**

## ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

### ೧) ಪ್ರಸ್ತಾವನೆ:

ಮಾನವನ ಜೀವನಕ್ಕೆ ಪ್ರಾಣವಾಯು ಅವಶ್ಯವಿದ್ದಷ್ಟೆ ಅವನ ಬಾಳಿಗೆ, ಬೆಳವಣಿಗೆಗೆ ಸ್ವಾತಂತ್ರ್ಯ ಅವಶ್ಯ, ಮಾನವನ ಪ್ರಾಣಿಗೆ ಮಾತ್ರವಲ್ಲ ಪ್ರಾಣಿಕುಲಕ್ಕೆ ಇದು ಅವಶ್ಯಕ. ಅಭಿಜಾತ ನಾಗರಹಾವು, ಗಜರಾಜ, ಪಕ್ಷಿಂದ್ರ, ಗರುಡಪಕ್ಷಿ ತಮ್ಮನ್ನು ಸೆರೆಹಿಡಿದಾಗ ಆ ಪಾರತಂತ್ರ್ಯವನ್ನು ಸಹಿಸದೆ ತಮ್ಮ ಸ್ವಾತಂತ್ರ್ಯಕ್ಕಾಗಿ ಅಸುನೀಗಿದ ಉದಾಹರಣೆಗಳುಂಟು.

ನೆಮ್ಮದಿಯಾಗಿದ್ದ ಮಾನವ ಶಿಶು ತನ್ನ ಬೆಳವಣಿಗೆಗೆ ಸ್ವಾತಂತ್ರ್ಯ ಬೇಕೆಂದೇ ಗರ್ಭದಿಂದ ಹೊರಗೆ ಬರುವುದು. ವಯಸ್ಸಿಗೆ ಬಂದ ಮಕ್ಕಳು ಮುಕ್ತಜೀವನಕ್ಕಾಗಿ ತಮ್ಮ ತಂದೆ ತಾಯಿಗಳನ್ನು ಅಗಲಿ ಸ್ವತಂತ್ರವಾಗಿರಲು ಹವಣಿಸುವುವು.

ಇದೇ ಮಾತು ಎಚ್ಚತ್ತ ರಾಷ್ಟ್ರಗಳಿಗೆ, ತನ್ನ ರಾಷ್ಟ್ರೀಯತ್ವದ ಅರಿವು ಉಂಟಾದ ಜನಗಣಕ್ಕೆ ಅನ್ವಯಿಸುವುದು. ಪ್ರತಿ ರಾಷ್ಟ್ರವು ಸ್ವಾತಂತ್ರ್ಯವಾಗಿರಬೇಕೆಂದು ಇಚ್ಛಿಸುವುದು ಪ್ರಕೃತಿಸಿದ್ದವು, ಒಬ್ಬನು ಇನ್ನೋಬ್ಬನನ್ನು ಕೇವಲ ಪಾಶವೀಬಲದಿಂದ ದಾಸ್ಯದಲ್ಲಿಡುವುದು ಎಷ್ಟು ಅನೀತಿಕರ ಹಾಗೂ ಅನ್ಯಾಯದ್ದೂ ಅಷ್ಟೆ, ಒಂದು ರಾಷ್ಟ್ರವು ಇನ್ನೊಂದನ್ನಾಳುವುದು ಅನ್ಯಾಯವಾದದ್ದು ಹಾಗೂ ಅಸಹ್ಯವಾದದ್ದು.

ಭಾರತದಲ್ಲಿ ಸ್ಥಾಪಿತವಾದ ಬ್ರಿಟಿಷರ ರಾಜ್ಯವು ಆ ತರಹದ್ದಿತು. ಸ್ವಾತಂತ್ರ್ಯದ ಬಗ್ಗೆ ಎಚ್ಚರ ಹುಟ್ಟಿದ. ಆ ಬಗ್ಗೆ ಆತುರರಾದ ಭಾರತೀಯರು ವೈಯಕ್ತಿಕವಾಗಿ ಇಲ್ಲವೇ ಸಣ್ಣ ದೊಡ್ಡ ಗುಂಪು ಕಟ್ಟಿ ಬ್ರಿಟಿಷರ ಆಳ್ವಿಕೆಯನ್ನೆದುರಸುತ್ತಲೇ ಇದ್ದರು. ೧೮೫೭ರಲ್ಲಿ ಶಸ್ತ್ರಾಸ್ತ್ರಗಳಿಂದ ಭಾರತೀಯ ಸೈನಿಕರು, ಹಲ ಕೆಲವು ಅರಸರು ದೊಡ್ಡ ಬಂಡಾಯವನ್ನೆ ಹೂಡಿದರು. ಹಿಂದೂ ರಾಜ ಮಹಾರಾಜರು. ಹಿಂದಿ ಸೈನಿಕರ ನೇಕರು ಈ ಕಾಲಕ್ಕೆ ಬ್ರಿಟಿಷರ ಪರವಾಗಿಯೇ ಹೋರಾಡಿ ಬ್ರಿಟಿಷ ಸತ್ತೆಯನ್ನು ಇಲ್ಲಿ ಸ್ಥಿರಗೊಳಿಸಿದರು. ಮುಂದೆ ಸಶಸ್ತ್ರ ಹೋರಾಟ ಸಾಧ್ಯವಿಲ್ಲವೆಂದು ಮನಗಂಡ ಭಾರತೀಯ ಮುಖಂಡರು ನಿಃಶಸ್ತ್ರ ಪ್ರತೀಕಾರದ ಮಾರ್ಗವನ್ನು, ಸಾರ್ವಜನಿಕ ಆಂದೋಲನದ ಮಾರ್ಗವನ್ನು ಸ್ವೀಕರಿಸಿದರು.

೧೯೧೯ರಲ್ಲಿ ಮತ್ತು ಮುಂದೆ ಅದಕ್ಕೆ ಅಹಿಂಸಾಮಯ ಅಸಹಕಾರದ ದುಷ್ಟ ಕಾನೂನುಗಳ ಭಂಗದ, ಕರ ನಿರಾಕರಣೆಯಂಥ, ಉಗ್ರ ಚಳುವಳಿಯ ಹಾಗೂ ವಿವಿಧ ಸತ್ಯಾಗ್ರಹಗಳ ರೂಪವನ್ನು ಕೊಟ್ಟರು.

ಎಂದಿನಂತೆ ಕರ್ನಾಟಕವು ತನ್ನ ವೀರ ಪರಂಪರೆಗೆ ಸಲ್ಲುವಂತೆ ಆ ಎಲ್ಲ ಗಾಂಧೀ ಪ್ರಣೀತ ಚಳುವಳಿಗಳಲ್ಲಿ ಭಾಗವಹಿಸುತ್ತಾ ಬಂದಿತು. ಕರ್ನಾಟಕದ ಹಲವು ಸಣ್ಣ ಮತ್ತು ದೊಡ್ಡ ಸಂಸ್ಥಾನಗಳೆಲ್ಲಾ ಒಂದಿಲ್ಲಾ ಒಂದು ರೀತಿಯಲ್ಲಿ ಬ್ರಿಟಿಷ ಭಾರತದ ತೋಳತೆಕ್ಕೆಯಲ್ಲಿದ್ದವು. ರಾಷ್ಟ್ರಮಟ್ಟದಲ್ಲಿ ನಡೆದಂತಹ. ರಾಷ್ಟ್ರೀಯ ಚಳುವಳಿಗಿಂತ ಭಿನ್ನವಾಗಿ ಮತ್ತು ತೀವ್ರವಾಗಿ ಹೈದರಾಬಾದ ಕರ್ನಾಟಕದಲ್ಲಿಯೂ ಕೂಡ ನಡೆದಿರುವುದು ಚರಿತ್ರಾರ್ಹ ಘಟನೆಯಾಗಿದೆ.

ಹೈದರಾಬಾದ ಕರ್ನಾಟಕದ ಜನತೆ ಬ್ರಿಟಿಷರ ದಾಸ್ಯದಲ್ಲಿದ್ದ ನಿಜಾಮ ದಾಸ್ಯದೊಳಗೆ ಮತಾಂಧ ಕೆಲ ಮುಸ್ಲಿಂ ಜನ ಹಾಗೂ ಸಂಘಟನೆಗಳ ಅಡಿಯಲ್ಲಿ ನರಳಾಡಬೇಕಾಗಿತ್ತು ಬ್ರಿಟಿಷರು ಹೈದರಾಬಾದ ಸಂಸ್ಥಾನ ಮತ್ತು ಇಡೀ ಭಾರತಾದ್ಯಂತ ನಡೆದ ಅಪ್ರತಿಮ ಹೋರಾಟಕ್ಕೆ ಮಣಿದು, ಸ್ವಾತಂತ್ರ್ಯ ನೀಡುವ ಮುನ್ಸೂಚನೆಯನ್ನು ನೀಡಿದರು. ಇದು ಹೈದರಾಬಾದ ಸಂಸ್ಥಾನದ ನಿಜಾಮನಿಗೆ "ಬಲವಿಲ್ಲದ ಕಾಲಕ್ಕೆ ನೆಲವು ಎತ್ತಿ ಬಡಿದಂತೆ" ಅನುಭವ ನೀಡಿದ್ದಿರಬೇಕು. ಏಕೆಂದರೆ ಈಗಾಗಲೇ ಸಂಸ್ಥಾನದಡೀ ಜನತೆಯ ತೀವ್ರ ವಿರೋಧದ ನಡುವೆ ಬ್ರಿಟಿಷರು ನೀಡಿದ ಈ ಹೇಳಿಕೆ ಆತನ ಅಧಿಕಾರ ದಾಹದ ಮನಸ್ಸಿಗೆ ತೀವ್ರ ಅಘಾತವನ್ನುಂಟು ಮಾಡಿತು.

ಇಂಗ್ಲೆಂಡಿನ ಪ್ರದಾನಿ ಲಾರ್ಡ ಅಟ್ಲೆ ಮೌಂಟ ಬ್ಯಾಟನರ ಯೋಜನೆಯಂತೆ ೧೯೪೭ ಅಗಸ್ಟ ೧೫ ರಂದು ಮದ್ಯರಾತ್ರಿ ಭಾರತಕ್ಕೆ ಸ್ವಾತಂತ್ರ್ಯ ನೀಡಿರುವ ಘೋಷಣೆ ಮಾಡಿದರು. ಅಂದು ಅಸ್ತಿತ್ವದಲ್ಲಿದ್ದ ೫೬೨ ಸಂಸ್ಥಾನಗಳಲ್ಲಿ ಕಾಶ್ಮೀರ, ಜುನಾಗಡ ಮತ್ತು ಹೈದರಾಬಾದಿನ ಹೊರತು ಪಡಿಸಿ ಉಳಿದೆಲ್ಲಾ ಸಂಸ್ಥಾನಗಳು ಅತೀವ ಸಂತೋಷದಿಂದ ಮತ್ತು ಉಲ್ಲಾಸದಿಂದ ಭಾರತದ ಅಖಂಡತೆಗೆ ಧಕ್ಕೆ ತರದಂತೆ ಭಾರತೀಯ ಸಂಸ್ಥಾನದಲ್ಲಿ ಸೇರ್ಪಡೆಗೊಂಡವು. ಮೇಲೆ ಸೂಚಿಸಿರುವಂತೆ ಹೈದರಾಬಾದ ಸಂಸ್ಥಾನದ ನಿಜಾಮನು ಭಾರತದ ಹೃದಯಭಾಗದಲ್ಲಿ ಛೋಟಾ ಪಾಕಿಸ್ತಾನ (ಮತ್ತೊಂದು) ಸ್ಥಾಪಿಸುವ ದುಷ್ಟತನಕ್ಕೆ ಇಳಿದನು. ಆದರೆ ಆತನ ಆಸೆಗಳಿಗೆ ತಣ್ಣೀರು ಎರಚುವಂತೆ ಹೈದರಬಾದ ಸಂಸ್ಥಾನದ ದಶದಿಕ್ಕುಗಳಿಂದಲೂ ಸ್ವಾತಂತ್ರ್ಯದ ಕಿಡಿಗಳು ಬೆಂಕಿಯ ಉಂಡೆಯಂತೆ ಆತನ ಜೀವನಕ್ಕೆ ಸಂಚಕಾರ ತಂದವು. ಹಲವಾರು ಗಣ್ಯಾತೀಗಣ್ಯ ನಾಯಕರುಗಳು ಹೋರಾಟದ ಫಲಪ್ರದವಾಗಿ ಹಾಗೂ ಭಾರತದ ಉಕ್ಕಿನ ಮನುಷ್ಯ ನೆನಿಸಿಕೊಂಡ ಸರದಾರ ವಲ್ಲಭಾಯಿ ಪಟೇಲರು ತಾಯ್ನಾಡಿನ ಏಕತೆಗಾಗಿ ಯಾವ ಕಾರ್ಯವಾದರು ಸರಿ ಮಾಡುವ ಸ್ಥಿತಿಯಲ್ಲಿದ್ದರು. ಅಂತೆಯೇ ೧೯೪೮ರ ಸೇಪ್ಟೆಂಬರ ೧೩ ರಂದು ಹೈದರಾಬಾದ ಸಂಸ್ಥಾನದ ಮೇಲೆ ಸೈನಿಕ ಆಕ್ರಮಣವನ್ನು ಘೋಷಿಸುವಂತೆ ಮಾಡಿದವು. ಇವುಗಳೆಲ್ಲದರ ಫಲವಾಗಿ ೧೯೪೮ರ ಸೇಪ್ಟೆಂಬರ ೧೭ ರಂದು ಹೈದರಾಬಾದ ಸಂಸ್ಥಾನ ಭವ್ಯ ಭಾರತದ ಅಖಂಡತೆಯೊಳಗೆ ಲೀನವಾಯಿತು.

"ಆಪರೇಷನ ಪೋಲೋ" ದೊಂದಿಗೆ ಹೈದರಾಬಾದ ಸಂಸ್ಥಾನ ಭಾರತದ ಒಕ್ಕೂಟದೊಳಗೆ ಸೇರ್ಪಡೆಗೊಂಡರು, ಈ ಸಂಸ್ಥಾನದ ಜನತೆಗೆ ಅಷ್ಟೊಂದು ಹಿತಕರ ವಾತಾವರಣ ಸೃಷ್ಟಿಯಾಗಲಿಲ್ಲ. ಕಾರಣ ಬ್ರಿಟಿಷ ಭಾರತದಿಂದಾಗಿ ಹಾಗೂ ಅನೇಕ ಚಿಕ್ಕ ಪುಟ್ಟ ಸಂಸ್ಥಾನಗಳಿಂದಾಗಿ ಕನ್ನಡ ಸಂಸ್ಕೃತಿ ಮತ್ತು ಕನ್ನಡ ಭಾಷೆಯನ್ನು ಮಾತನಾಡುವವರು, ವಿವಿದೆಡೆ ಹರಿದು ಹಂಚಿ ಹೋಗಿದ್ದರು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹಲವಾರು ನಾಯಕರುಗಳ ಜೊತೆ ಮತ್ತೆ ಕೆಲವರು ಕನ್ನಡಿಗರನ್ನು ಒಂದುಗೂಡಿಸುವ ಏಕೀಕರಣದ ಕೈಕಾರ್ಯಕ್ಕಿಳಿದರು.

ಕೇಂದ್ರ ಸರ್ಕಾರವು ೧೯೫೬ರಲ್ಲಿ ಪೊಟ್ಟಿ ಶ್ರೀರಾಮುಲು ಮರಣದ ಫಲವಾಗಿ ಆಂದ್ರಪ್ರದೇಶ ರಾಜ್ಯದ ಒಪ್ಪಿಗೆ ಸೂಚಿಸಲಾಗಿ, ಕರ್ನಾಟಕದಲ್ಲಿಯೂ ಕೂಡ ಏಕೀಕರಣ ಹೋರಾಟದ ಚಳುವಳಿಗಳು ಚುರುಕುಗೊಂಡವು. ಹಲವಾರು ಸಂಘಟನೆಗಳು ರೈತರು ವಿದ್ಯಾರ್ಥಿಗಳು ಸ್ತ್ರೀಯರು ಮತ್ತು ಮಿಗಿಲಾಗಿ ಸಾಹಿತಿಗಳ ಅಭೂತಪೂರ್ವ ಬೆಂಬಲದೊಂದಿಗೆ ಕರ್ನಾಟಕ ಏಕೀಕರಣದ ಚಳುವಳಿ ಮತ್ತಷ್ಟು ತೀವ್ರತೆ ಪಡೆದುಕೊಂಡಿತು ಹಲವು ಸಾಹಿತಿಗಳು ಕನ್ನಡ ಸಾಹಿತ್ಯದ ಮೂಲಕ ಜನತೆಯಲ್ಲಿ ಭಾಷಾಭಿಮಾನವನ್ನು ಉಕ್ಕಿಸಿದರು.

ಶಾಂತಕವಿ "ರಕ್ಷಿಸು ಕರ್ನಾಟಕ ದೇವಿ.
ಸಂರಕ್ಷಿಸು ಕರ್ನಾಟಕ ದೇವಿ."
ರಾಷ್ಟ್ರಕವಿ ಕುವೆಂಪು "ಜಯ ಭಾರತ ಜನನೀಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ".
ಮಂಗೇಶಪೈ "ತಾಯಿ ಬಾರೇ ಮೊಗವ ತೊರೆ
ಕನ್ನಡಿಗರ ಮಾತಾಯೆ". ೧

ಕನ್ನಡಿಗರಲ್ಲಿ ನಿಜವಾಗಿಯೂ ಭಾವನಾತ್ಮಕ ಐಕ್ಯತೆ ಉಂಟಾಗಿದ್ದು ಕನ್ನಡ ಸಾಹಿತ್ಯದಿಂದಲೇ, ಈ ರೀತಿ ಸಂಘಟನೆಗೊಂಡ ಏಕೀಕರಣ ಚಳುವಳಿಯು ನವೆಂಬರ ೧. ೧೯೫೬ ರಲ್ಲಿ ಏಕೀಕೃತ ವಿಶಾಲ ವೈಸೂರು ರಾಜ್ಯವಾಗಿ ಅಸ್ತಿತ್ವಕ್ಕೆ ಬಂದಿತು. ಹೊಸ ರಾಜ್ಯವನ್ನು ರಾಷ್ಟ್ರಪತಿ "ರಾಜೆಂದ್ರ ಪ್ರಸಾದ" ಉದ್ಘಾಟಿಸಿದರು. ಅದರಲ್ಲಿ ೧೯ ಜಿಲ್ಲೆಗಳು ಇದ್ದವು. ಜಯಚಾಮರಾಜಒಡೆಯರ ಅವರು ರಾಜ್ಯಪಾಲರಾದರೆ. ವಿಶಾಲ ಕರ್ನಾಟಕದ ಪ್ರಥಮ ಮುಖ್ಯ ಮಂತ್ರಿಯಾಗಿ ಎಸ್.ನಿಜಲಿಂಗಪ್ಪಾನವರು ಆಯ್ಕೆಯಾದರು. ಕೊನೆಗೆ ದೇವರಾಜ ಅರಸ ಮುಖ್ಯಮಂತ್ರಿ ಕಾಲದಲ್ಲಿ ಈ ಮೈಸೂರು ರಾಜ್ಯಕ್ಕೆ ಕರ್ನಾಟಕ ಎಂದು ನವೆಂಬರ ೧. ೧೯೭೩ ರಂದು ನಾಮಕರಣಮಾಡಲಾಯಿತು.

"ಅಂದು ಭಾರತದ ಬಾನಿನಲ್ಲಿ ಸ್ವಾತಂತ್ರ್ಯ
ಸೂರ್ಯನು ಉದಯಿಸಿದ ಸುದಿನ
ಭಾರತೀಯರ ಹೆಮ್ಮೆಯ ಗೆಲುವಿನ
ನಲುವಿನ ಸಾಕಾರಕ್ಕೆ ಸಮೃದ್ಧ ಫಲ ನೀಡುವ
ಅಮೃತ ಘಳಿಗೆಯನ್ನು ಇತಿಹಾಸದ
ಪುಟ ಪುಟಗಳಲ್ಲಿ ಸುವರ್ಣಾಕ್ಷರಗಳಿಂದ
ಬರೆದಿರುವ ನೆನಪಿನ ಪವಿತ್ರ ದಿನ". [೨]

ಸ್ವಾತಂತ್ರ್ಯ ಎಂದರೇನು?.

ಭರತ ಭೂಮಿಯ ಇತಿಹಾಸದ ಅವಲೋಕನ ಮಾಡಿದಾಗ ಕ್ಷಣಾರ್ಧದಲ್ಲಿ ಎದ್ದು ಕಾಣುವಂತಹ ಚರಿತ್ರಾರ್ಹ ಸಂಗತಿಯೇನೆಂದರೆ "ಸ್ವಾತಂತ್ರ್ಯಕ್ಕಾಗಿ ಹೋರಾಟ, ಪರಕೀಯರು ಬಂದು ನೆಲೆಯೂರಿ ನಿಂತಾಗ ನಾಡಿಗರ ಮೇಲೆಯೇ ತಮ್ಮ ಆಳ್ವಿಕೆ ಹೇರಿದಾಗ ಎದ್ದಂತಹ ಪ್ರತಿಭಟನೆಯ ನಿರಂತರ ಹೋರಾಟವೆ ಸ್ವಾತಂತ್ರ್ಯ ಸಮರ".

ಸ್ವಾತಂತ್ರ್ಯವೆಂದರೆ ಬ್ರಿಟಿಷರೊಡನೆ ಹೋರಾಡುವುದು ಎಂದರ್ಥದಲ್ಲ. ಭಾರತದ ಸಂಪೂರ್ಣ ಪ್ರಗತಿಯೇ ಸ್ವಾತಂತ್ರ್ಯದ ಸತ್ಯಸಾರ ಎಂದುಹೇಳಬಹುದು. ಸ್ವಾತಂತ್ರ್ಯ ಹೋರಾಟವೆಂದರೆ ಒಬ್ಬ ವ್ಯಕ್ತಿ ತನ್ನ ವೈಯಕ್ತಿಕ ಲಾಭಕ್ಕಾಗಿ ಹೋರಾಡಿದರೆ ಆತ ಹೋರಾಟಗಾರನಾಗಲಾರ. ಆತ ತನ್ನ ಸ್ವಭಾವವಷ್ಟೆ ಅಲ್ಲದೆ ತತ್ವ ಮತ್ತು ನಿಷ್ಠೆಗಳಿಗೆ ಹೋರಾಡಿ ಯಾವ ತ್ಯಾಗಕೂ ಸಿದ್ಧನಾದರೆ ಆತನನ್ನು ಕಾಲಮಾನ ಪರಿಸ್ಥಿತಿಗಳನ್ನು ಅನುಲಕ್ಷಿಸಿ ಹೋರಾಟಗಾರನೆಂದು ಕರೆಯಬಹುದು. ಎಂದು ಡಾ॥ ಸರೋಜಿನಿ ಶಿಂತ್ರಿ ಹೇಳಿದ್ದಾರೆ. "ವರ್ಗಬೇದಗಳಿಲ್ಲದ ಆದರ್ಶ ಸಮಾಜವೇ ನಮ್ಮ ಗುರಿ. ಈ ಸ್ವಾತಂತ್ರ್ಯವೆಂಬ ಗುರಿ ಸಾಧನೆಗಾಗಿ ನಾವು ಶ್ರಮಿಸಬೇಕು, ಸ್ವಾತಂತ್ರ್ಯ ಹೋರಾಟದ ಪರಮ ಉದ್ದೇಶವಾಗಿದೆ." [೩] ಎಂದು ಸ್ವಾತಂತ್ರ್ಯ ಚಳುವಳಿಯ ಮಹಾನ ನೇತಾರಾ ಗಾಂಧೀಜೀಯವರು ಅನುಮೋದಿಸಿದ್ದಾರೆ.

**೩.) ಸ್ವಾತಂತ್ರ್ಯದ ಅರ್ಥ ವ್ಯಾಖ್ಯಾನಗಳು:**

ಸ್ವಾತಂತ್ರ್ಯ ಎಂದರೇ ಲೈಸೆನ್ಸ ಎಂಬ ತಪ್ಪು ಅರ್ಥವನ್ನು ಕಲ್ಪಿಸಿದ್ದೇವೆ. ಈ ಅರ್ಥ ಕಲ್ಪಿಸಿಯೇ ನಾವು ಹಾಳಾಗುತ್ತೇವೆ. "ಸ್ವಾತಂತ್ರ್ಯ" ಎಂಬ ಶಬ್ದದ ನಿಜವಾದ ಅರ್ಥವನ್ನು ಸರಿಯಾದ ಹಿನ್ನೆಲೆಯಲ್ಲಿ ಕೊಡಬೇಕು. ಪ್ರಜೆಗಳು ಯಾವ ಸಂದರ್ಭದಲ್ಲಿಯೂ ವಿವೇಕ ಕಳೆದುಕೊಳ್ಳದೆ ಸಂಯಮದಿಂದ ವರ್ತಿಸಿ ದೇಶದ ಐಕ್ಯತೆಗೆ ಧಕ್ಕೆ ಬರದಂತೆ ದುಡಿಯಬೇಕು. ಇದೇ ಸ್ವಾತಂತ್ರ್ಯ ಎಂಬ ಪದದ ಗೂಡಾರ್ಥ. ಸ್ವಾತಂತ್ರ್ಯ ಅಮೂಲ್ಯವಾದುದೆಂಬುದು ನಿಜ. ಆದ್ದರಿಂದಲೇ ಅದಕ್ಕೆ ಮಿತಿ ಇರಬೇಕು ಎನ್ನುವರು.

ಸಂಯಮವಿಲ್ಲದ ಸ್ವತಂತ್ರ್ಯಕ್ಕೆ ಯಾವ ಬೆಲೆಯೂ ಇಲ್ಲ. ಸಾಂಯಮ ಸ್ವಾತಂತ್ರ್ಯ ಎಂಬ ಕಲ್ಪನೆಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಸಂಯಮವಿಲ್ಲದ ಸ್ವಾತಂತ್ರ್ಯ ವಿಗ್ರಹವಿಲ್ಲದ ಗುಡಿಯಂತೆ ಎಂದು ಕರೆಯಬಹುದು.

### ಅ) ಸ್ವಾತಂತ್ರ್ಯ:

ಸ್ವಸ್ವ-ತಂತ್ರ-ಸ್ವಾತಂತ್ರ್ಯ-ತನ್ನ ತಂತ್ರದಲ್ಲೆ ಇರುವವ ಅಂದರೆ ತನ್ನ ಅಧೀನದಲ್ಲೆ ಇರುವ ಅಂದರೆ ಪರರ ಅಧೀನದಲ್ಲಿರದವನೇ ಸ್ವಾತಂತ್ರ್ಯ. ಅವನು ಅನುಭವಿಸುವ ಈ ಸ್ಥಿತಿಯೇ ಸ್ವಾತಂತ್ರ್ಯ. ಹೀಗೆ ಸ್ವಾತಂತ್ರ್ಯ ಎಂಬುದೊಂದು ಸ್ಥಿತಿ ವಿಶೇಷ ಇಲ್ಲಿ ಸ್ವಶಕ್ತಿ ಸ್ವಾಭಾವಿಕ ಪ್ರವೃತ್ತಿಗಳ ವರ್ಧನೆಗೆ ಯಾವುದೇ ನಿರ್ಭಂಧ ಇರುವುದಿಲ್ಲ. "ಸ್ವರೂಪ, ಪ್ರಮಿತಿ, ಪ್ರವೃತ್ತಿ, ಸತ್ತ್ರೈವಿದ್ಯೆ ಪರ ಅನಪೇಕ್ಷಿತ್ವಂ ಸ್ವಾತಂತ್ರ್ಯ ಪರ ಅಪೇಕ್ಷಿತ್ವಂ ಅಸ್ವಾತಂತ್ರ್ಯ ಎನ್ನತ್ತಾರೆ. ಮದ್ವಾಚಾರ್ಯರು."೪ ತತ್ವ ಸಂಖ್ಯಾನದಲ್ಲಿ ತನ್ನ ಸ್ವರೂಪದ ಪರಿಮಿತಿ ಮತ್ತು ಪ್ರವೃತ್ತಿ ಇವು ಮೂರನ್ನು ತಿಳಿದುಕೊಂಡು ಬೇರೆಯವರಿಂದ ಏನನ್ನು ಅಪೇಕ್ಷಿಸದೇ ಇರುವುದೇ ಸ್ವಾತಂತ್ರ್ಯ ಪರರಿಂದ ಬಯಸುವುದೇ ಪರತಂತ್ರ ಎಂದು ಬಣ್ಣಿಸಿದ್ದಾರೆ.

ಸ್ವಾತಂತ್ರ್ಯವೆಂದರೆ ಬದುಕಿನ ಕೆಲ ಸೌಲಭ್ಯಗಳು ಎಂದು ವರ್ಣಿಸಲಾಗುತ್ತದೆ. ವೇದವ್ಯಾಸರು ತಮ್ಮ ಪುರಾಣದಲ್ಲಿ ಪಾಣಿನಿ ತನ್ನ ವ್ಯಾಕರಣದಲ್ಲಿ ಸ್ವಾತಂತ್ರ್ಯ ಕುರಿತು ಸಾಕಷ್ಟು ಹೇಳಿದ್ದಾರೆ.

### ಆ) ವ್ಯಾಖ್ಯೆಗಳು:

ಸ್ವಾತಂತ್ರ್ಯದ ಕುರಿತು ಹಲವಾರು ತತ್ವಜ್ಞಾನಿಗಳು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ನೀಡಿದ್ದಾರೆ ಅದರಲ್ಲಿ ಕೆಲವುಗಳನ್ನು ಇಲ್ಲಿ ಕೂಡಲಾಗಿದೆ.

ಇಮ್ಯಾನುಯಲ್ ಕೌಂಟ ಕವೂರ ಎಂಬವವರು ತಮ್ಮ "ಫಿಲಾಸಫಿ ಆಫ ಲಾ" ಎಂಬ ಕೃತಿಯಲ್ಲಿ ಸ್ವಾತಂತ್ರ್ಯ ಎಂಬ ಪದವನ್ನು ಹೀಗೆ ವಿವರಿಸಿದ್ದಾರೆ. "ಸ್ವಾತಂತ್ರ್ಯವೆಂದರೆ ಇನ್ನೊಬ್ಬನ ಚಿತ್ತದ ಒತ್ತಾಯಕ್ಕೆ ನಿಲುಕದ ಸಾಮಾನ್ಯ ಸ್ವಾತಂತ್ರ್ಯ ಅನುಭವಕ್ಕೆ ಅಡ್ಡಿಯಾಗದ ರೀತಿಯಲ್ಲಿ ನಿರಂತರವಾಗಿ ನಡೆದುಕೊಂಡು ಹೋಗುವುದು".

ಲೈಸನ್ ಬ್ರೈಸನ್ ಎಂಬಾತ್ "ಸಾಯನ್ಸ ಆ್ಯಂಡ ಪ್ರೀಡಮ್" ಎಂಬ ಕೃತಿಯಲ್ಲಿ "ತನ್ನ ಜೀವನ ವಿಧಾನದಲ್ಲಿ ವೈವಿದ್ಯ ತಂದುಕೊಂಡು ಮಾರ್ಪಡಿಸಿಕೊಳ್ಳಲು ಮನುಷ್ಯನಿಗಿರುವ ನಾನಾ ಅವಕಾಶಗಳಲ್ಲಿ ಉತ್ತಮವೆನಿಸಿದ್ದನ್ನು ಆಯ್ದುಕೊಳ್ಳುವುದು. ಅವನು ಸ್ವತಂತ್ರನು ಈ ಆಯ್ಕೆಗಿರುವ ಅವಕಾಶದ ಫಲಿತಾಂಶವೇ ಸ್ವಾತಂತ್ರ್ಯ".

ವಾಲ್ಟ ಡಬ್ಲ್ಯು ಹ್ಯಾಮಿಲ್ಟನ, "ಸ್ವಾತ್ಮ ಏಕಸದ್ವಾರ ಹಾಗೂ ಸ್ವನುಭವ ಸಂಪತ್ತಿನ ಮನುಷ್ಯನು ಪರಮ ಪ್ರಮಾಣದಲ್ಲಿ ಸಮಾಜಕ್ಕೆ ಉಪಕಾರಿಯಾಗಬಲ್ಲನು. ಅವನಿಗೆ ಈ ಅವಕಾಶ ಕೊಡತಕ್ಕದ್ದು ಸ್ವಾತಂತ್ರ್ಯ" ಎಂದು ವಿವರಿಸಿದ್ದಾರೆ.

ಹೆರಾಲ್ಡ ಲಾಸ್ಕಿ: ಎಂಬ ಆಂಗ್ಲ ರಾಜ್ಯ ತತ್ವಜ್ಞನು ಸ್ವಾತಂತ್ರ್ಯದ ಮೂರು ಲಕ್ಷಣಗಳನ್ನು ವಿವರಿಸುತ್ತಾನೆ.

೧) ವ್ಯಕ್ತಿತ್ವದಲ್ಲಿ ಸಮರಸ ಪೂರ್ಣವಾದ ಸ್ಥಿತಿ.

೨) ಪ್ರತಿಬಂಧಕ ವಿಲ್ಲದಿರುವಿಕೆ.

೩) ಸ್ವಂತ ಇಚ್ಛೆ ಅಥವಾ ಸಂಕಲ್ಪದಂತೆ ಕಾರ್ಯರಾಂಭ ಮಾಡುವ ಅವಕಾಶ.

ಹೋಕಿನ ಕ್ಯಾಲನ್ ಎಂಬಾತನ ಅಭಿಪ್ರಾಯದಲ್ಲಿ.

"ಸ್ವಾತಂತ್ರ್ಯವು ಸ್ವರ್ಗ ನರಕ ಪರಲೋಕ ಭೀತಿಯನ್ನಿಡುವ ಮತ ದೃಷ್ಟಿಯಿಂದಲೂ ವಿಚಾರಕ್ಕಾಗಲಿ ಕಾರ್ಯಸನ್ನಹಕಾಗಲಿ ಸನಿಹಾಕ್ಕಾಗಲಿ ಒದಗಬಹುದಾದ ವಿಘ್ನಗಳನ್ನು ನಿವಾರಿಸತಕ್ಕದ್ದು ಸ್ವಾತಂತ್ರ್ಯ". ೫

ಮನುಷ್ಯನು ತನ್ನ ಕಾರ್ಯ ಚಟುವಟಿಕೆಗಳನ್ನು ತನ್ನ ಜೀವನ ವಿಧಾನ ಮತ್ತು ತನ್ನ ಸುತ್ತ ಮುತ್ತಲೂ ವಾತಾವರಣ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ಇಟ್ಟುಕೊಂಡಿರುವ ಮನೋಭಾವನೆ ಸ್ವಾತಂತ್ರ್ಯ ಎಂಬುದು ಅನೇಕ ಲೇಖಕರ್ ಅಭಿಪ್ರಾಯ.

೫) ಸ್ವಾತಂತ್ರ್ಯ ಚಳುವಳಿಯ ನೈತಿಕ ಸಿದ್ಧಾಂತ:

ಯಾವುದೇ ಚಳುವಳಿ ಜನ ಸಮೂಹದಲ್ಲಿ ಬೆಳೆದು ಅವರ ಆಶೋತ್ತರಗಳಿಗೆ ಸ್ಪಂದಿಸಬೇಕಾದರೆ ಅದಕ್ಕೆ ತನ್ನದೇ ಆದ ನೈತಿಕ ತತ್ವದ ನೆಲೆಗಳು ಅವಶ್ಯವಾಗಿರಬೇಕು. ಈ ದೃಷ್ಟಿಯಲ್ಲಿ ಸ್ವಾತಂತ್ರ್ಯ ಚಳುವಳಿಯು ನೀತಿ ನಿಯಮಗಳ ತತ್ವ ಎಂಬ ಸಿದ್ಧಾಂತದ ಅಸ್ತ್ರದ ಗೋಡೆಯನ್ನು ಕಟ್ಟಿಕೊಂಡು ಅದಕ್ಕೆ ಚಾಲನೆ ನೀಡಿದ್ದಾರೆ ನೈತಿಕ ಸಿದ್ಧಾಂತದ ಅವತರಣಿಕೆಗಳನ್ನು ನೋಡೋಣ.

**ಅ) ಅಹಿಂಸೆ:**

ಅಹಿಂಸೆ ಎಂದರೆ ಹೊಡೆಯದೆ, ಬಡಿಯದೆ ಇರುವುದಷ್ಟೆ ಅಲ್ಲ. ಇತರರಿಗೆ ಯಾವ ವಿಧದಲ್ಲಿ ನೋವುಂಟು ಮಾಡಿದರೂ ಅದು ಹಿಂಸೆ. ಶತೃಗಳಾಗಲಿ, ಮಿತ್ರನಾಗಲಿ ಯಾರಿಗೂ ನೋವೆಣಿಸದೆ ಶತೃವಿನ ಮನಸ್ಸನ್ನು ಗೆದ್ದುಕೊಂಡರೆ ಅದು ನಿಜವಾದ ಅಹಿಂಸೆ. ಹೇಡಿ ಅಹಿಂಸಾವೃತ್ತಿಯಾಗಲಾರ ಮಹಾಪೌರುಷ ಇದ್ದಲ್ಲಿ ಮಾತ್ರ ಅಹಿಂಸಾವ್ರತ ಸಾಧ್ಯ, "ಹೇಡಿತನದಿಂದ ಹಿಂಸೆ ಎನ್ನವುದಕ್ಕಿಂತ ಅಹಿಂಸೆಯೇ ನನಗೆ ಪ್ರಿಯ." ೬ ಎಂದು ಮಹಾತ್ಮಗಾಂಧೀಜೀ ಅನುಕರಿಸಿದ್ದಾರೆ.

ಒಟ್ಟಾರೆ ಎಂತಹದೆ ಶಿಕ್ಷಿಸಿಕ್ಕರೂ ಅಹಿಂಸೆಗೆ ಇಳಿಯದಿರುವುದು, ಅಹಿಂಸೆಯಲ್ಲಿ ಮಹಾಶಕ್ತಿ ಅಡಗಿದೆ. ಅದು ವೀರರ ಲಕ್ಷಣ, ದುಷ್ಟ ಸಂಕಲ್ಪವು ಅದರ ಎದುರಿನಲ್ಲಿ ನಿಲ್ಲಲಾರದು. ಅಹಿಂಸೆಯ ಎದುರಿನಲ್ಲಿ ದ್ವೇಷ, ಕೋಪ ಇತ್ಯಾದಿ ದುರ್ಗುಣಗಳು ಮಾಯವಾಗುತ್ತವೆ. ಎಂದು ಗ್ರಹಿಸುತ್ತಾರೆ.

**ಆ) ಸತ್ಯ:**

ಅಹಿಂಸೆ ಮತ್ತು ಸತ್ಯ ಇವುಗಳನ್ನು ಕುರಿತು ಹೇಳಬೇಕೆಂದರೆ, ಅಹಿಂಸೆ ಸತ್ಯ ಇವು ಅವಳಿ-ಜವಳಿ ಒಂದನ್ನು ಬಿಟ್ಟು ಇನ್ನೊಂದು ಇರಲಾರವು. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಸತ್ಯವು ಗುರಿಯಾದರೆ, ಅಹಿಂಸೆ ಅದರ ಸಾಧನೆಯ ಮಾರ್ಗ. ಯಾವ ಪ್ರಾಣಿಯ ಮನಸ್ಸಿಗೂ, ಶರೀರಕ್ಕೂ ನೋವು ಮಾಡದೆ ಇರವುದೇ ಅಹಿಂಸೆ, ಎಂದು ಯಂಗ ಇಂಡಿಯಾ ಪತ್ರಿಕೆಯಲ್ಲಿ ಪ್ರಕಟವಾಗಿರುವುದನ್ನು ನೋಡಿದಾಗ ದೈಹಿಕವಾಗಿ, ಮಾನಸಿಕವಾಗಿ ಯಾರಿಗೂ ನೋವನ್ನುಂಟು ಮಾಡದೇ ಎಷ್ಟೇ ಕಷ್ಟ ಬಂದರು ಸಹನೆ, ತಾಳ್ಮೆಯಿಂದ ವರ್ತಿಸುವ ಭಾವನೆ ಬರುತ್ತದೆ.

**ಇ) ಸತ್ಯಾಗ್ರಹ:**

ಸತ್ಯಾಗ್ರಹವೆಂಬುದು ಮೂಲ ಸಂಸ್ಕೃತ ಶಬ್ದ ಸತ್ಯ+ಆಗ್ರಹ ಈ ಎರಡು ಪದಗಳ ಜೋಡಣೆಯಾಗುವುದರಿಂದ ಸತ್ಯದ ನಿಜವಸ್ತು ಯಥಾರ್ಥ ವಸ್ತು, "ಆಗ್ರಹವೆಂದರೆ ಗಟ್ಟಿಯಾಗಿ ಹಿಡಿಯುವುದು."[೭] ಸತ್ಯಾಗ್ರಹ ವೆಂದರೆ ಸತ್ಯಕ್ಕೆ ಅಂಟಿಕೊಳ್ಳುವುದು ಸತ್ಯವನ್ನು ಹಟದಿಂದ ಹಿಂಬಾಲಿಸಿ ಗೆಲ್ಲುವುದು.

ಅಸತ್ಯಗಳನ್ನು ಹೋಗಲಾಡಿಸಲು ಸಾಮೂಹಿಕವಾಗಿ ಅಹಿಂಸೆಯಿಂದ ಹೋರಾಡಲು ನಮ್ಮನ್ನು ಸಮರ್ಥಪಡಿಸುವ ವಿಶೇಷ ಸಾಧನವಾಗಿದೆ.

**ಅಧ್ಯಯನದ ಉದ್ದೇಶ:**

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಸಂಖ್ಯೆ ದೇಶಭಕ್ತರು, ಅನೇಕ ವಿಧಗಳಲ್ಲಿ ಕಷ್ಟ ಕಾರ್ಪಣ್ಯ ಅನುಭವಿಸಿರುತ್ತಾರೆ. ಜೈಲುವಾಸ, ಪ್ರಾಣತ್ಯಾಗ, ಹುತ್ಮಾತತೆ ಮುಂತಾದ ಕಷ್ಟ ಕಾರ್ಯಗಳನ್ನು ಅನುಭವಿಸಿರುವುದನ್ನು ಅರಿಯಬಹುದಾಗಿದೆ.

ಹೋರಾಟದಲ್ಲಿ ಪಾಲ್ಗೊಂಡು ದೊಡ್ಡವರಾದವರ ದೇಶಭಕ್ತಿ, ತ್ಯಾಗ ಇವು ವ್ಯಾಪಕವಾಗಿ ಪ್ರಸಿದ್ದತೆಯನ್ನು ಪಡೆದಿರುತ್ತವೆ. ಹೀಗಾಗಿ ಆಗಬೇಕಾದದ್ದು. ಆದರೆ ದೊರೆಯಬೇಕಾದದ್ದು ದೊರೆತರೆ ಅಲ್ಲ ಮಹಾನ ಸ್ವಾತಂತ್ರ್ಯ ಹೋರಾಟಗಾರರ ಹೆಗ್ಗಳಿಕೆ ಮಾತ್ರ ಕಾಣಿಸುತ್ತದೆ. ಆದರೆ ಶ್ರೀ ಸಾಮಾನ್ಯರು ಸಲ್ಲಿಸಿದಾಗ ಪ್ರಾಣತ್ಯಾಗ ಬಲಿದಾನ, ಅಳಿಲುಸೇವೆ ಬೆಳಕಿಗೆ ಬರದೆ ಹೋಗುತ್ತದೆ. ಅವರ ಪಾತ್ರವೇನು ಕಡಿಮೆಯೇನಲ್ಲ. ಹೊರಾಟದಲ್ಲಿ ಭಾಗವಹಿಸಿ ಸ್ವರ್ಗವಾಸ, ನರಕವಾಸ ಅನುಭವಿಸಿದವರ ಹೆಸರು ಬೆಳಕಿಗೆ ತರುವುದೇ ಈ ಅಧ್ಯಯನದ ಪ್ರಥಮ ಉದ್ದೇಶ.

ಸ್ವಾತಂತ್ರ್ಯ ನಮಗೆ ಲಭಿಸಿದುದು ಇತಿಹಾಸಕಾರರು ಇಲ್ಲಿಯವರೆಗೂ ಗುರುತಿಸಿಸುವ ಹಿರಿಯ ನಾಯಕರಿಗಂದ ಮಾತ್ರವಲ್ಲ ಇತಿಹಾಸದ ಪದರಿನಲ್ಲಿ ಐಕ್ಯವಾಗಿ ಹೋಗಿರುವ ನೂರಾರು ಸಾವಿರಾರು ಹೋರಾಟಗಾರರ ಹುತಾತ್ಮರ ಹುಮ್ಮಸ್ಸು ಮತ್ತು ಸಾಹಸದ ಫಲ. ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟಗಳು ತೀವ್ರಗೊಂಡವು. ಇದರ ನಂತರ ಏಕೀಕರಣ ಮತ್ತು ಸ್ವಾತಂತ್ರ್ಯ ಚಳುವಳಿಗಳು ತೀವ್ರಗೊಂಡವು. ಏಕೀಕರಣಕ್ಕಾಗಿ ೧೯೧೫ರ ಮೇ ३,४,೫ ರಂದು ಬೆಂಗಳೂರಿನಲ್ಲಿ ನಡೆದ ಪ್ರಥಮ ಸಾಹಿತ್ಯ ಸಮ್ಮೇಳನದಲ್ಲಿ ನಿರ್ಣಯ ಮತ್ತು ಚಾಲನೆ ನೀಡಲಾಯಿತು. ಹೈದರಾಬಾದ ಕರ್ನಾಟಕದ ಸ್ವಾತಂತ್ರ್ಯಕ್ಕಾಗಿ ೧೯೪೭ ರಲ್ಲಿ ಹೋರಾಟಗಳು ತೀವ್ರವಾದವು. ಈ ಏಕೀಕರಣ ಮತ್ತು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಹಲವಾರು ಬೀದರ ತಾಲ್ಲೂಕಿನ ಹೋರಾಟಗಾರರಿಗೆ ಇತಿಹಾಸದಲ್ಲಿ ಸ್ಥಾನ ದೊರಕಿಲ್ಲ. ದೊರಕುವ ಸಂಭವವು ಇಲ್ಲ ಆದ್ದರಿಂದ ಬೀದರ ತಾಲ್ಲೂಕಿನ ಭಾಗದಲ್ಲಿ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯ ಉಗಮದ ಬಗ್ಗೆ ಶೋಧಿಸುವುದು, ಸ್ವಾತಂತ್ರ್ಯ, ಹೋರಾಟದ ಚಳುವಳಿಯಲ್ಲಿ ಎಷ್ಟು ಜನ ಭಾಗವಹಿಸಿದರು ಎಂಬುದನ್ನು ಶೋಧನೆ ಮಾಡುವುದು. ಈ ಅಧ್ಯಯನದ ಉದ್ದೇಶವಾಗಿದೆ.

ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಎಷ್ಟು ಜನರು ಭಾಗವಹಿಸಿದ್ದರೆಂಬುದನ್ನು ಶೋಧನೆ ಮಾಡುವುದು, ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಭಾಗವಹಿಸಲು ಅವರಿಗೆ ಪ್ರೇರಕವಾದ ಸಂಗತಿಗಳನ್ನು ತಿಳಿದುಕೊಳ್ಳುವುದು ಚಳುವಳಿಯ ಕಾಲಕ್ಕೆ ತಾಲೂಕಿನಲ್ಲಿ –

- ವಾತಾವರಣವನ್ನು ತಿಳಿಯುವುದುರ ಜೊತೆಗೆ ಅವರ ಕಾರ್ಯ ಚಟುವಟಿಕೆಗಳನ್ನು ತಿಳಿಯುವುದು. ಹಾಗೂ ಸ್ವಾತಂತ್ರ್ಯ ಪಡೆಯುವಲ್ಲಿ ಸತ್ಯ ಅಹಿಂಸೆ ಸತ್ಯಾಗ್ರಹ ಮಂತಾದ ತತ್ವಗಳ ಪಾತ್ರಗಳನ್ನು ಅರಿತುಕೊಳ್ಳುವುದು ಈ ಅಧ್ಯಯನದ ವಿಷಯವಾಗಿದೆ.

**ಎಂ.ವ್ಹಿ.ಕೃಷ್ಣಸ್ವಾಮಿಯವರು:**

"೧೮೫೭ರಲ್ಲಿ ಹುಟ್ಟಿಕೊಂಡ ರಾಷ್ಟ್ರೀಯ ವಿಪ್ಲವ ಅಗ್ನಿಗಳಲ್ಲಿ ಭಾರತೀಯರು ಪ್ರಕಟಿಸಿದ ವೀರ ಸಾಹಸಗಳಿಗೂ, ಪ್ರಾಣಾಂತಿಕ ಘಟನೆಗಳಿಗೂ ತ್ಯಾಗ ಬಲಿದಾನಗಳಿಗೂ ಅಸಂಖ್ಯಾತ ನಿದರ್ಶನಗಳಿವೆ. ಆದರೆ, ಒಂದೂರಿನ ಸಮಸ್ಥ ಜನ ಸಮುದಾಯವು ಭಾರತದ ಸ್ವಾತಂತ್ರ್ಯ ಬಲಿ ಪೀಠದ ಮುಂದೆ ಧಗಧಗಿಸುವ ಅಗ್ನಿ ಜ್ವಾಲೆಯಲ್ಲಿ ಬೆಂದು ಹುತಾತ್ಮವಾದ ದೃಷ್ಟಾಂತ ದೊರೆಯುವುದು ಕನ್ನಡ ನಾಡಿನಲ್ಲಿ ಮಾತ್ರ".೮

ಅಂತಹ ನಾಡಿನಲ್ಲೊಂದಾದ ಭಿದರ ತಾಲ್ಲೂಕಿನ ಕೆಟ್ಟದೆಯ ಕಲಿಗಳ ಘನ ವ್ಯಕ್ತಿತ್ವದ ಹೋರಾಟವನ್ನು ಪರಿಚಯಿಸುವುದು ಈ ಅದ್ಯಯನದ ಮಹೋನ್ನತ ಕಾರ್ಯವಾಗಿದೆ.

ಒಟ್ಟಾರೆಯಾಗಿ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕ, ಯಾವ ರೀತಿಯಾಗಿ ತನ್ನ ಪಾಲಿನ ಕರ್ತವ್ಯವನ್ನು ಪೂರೈಸಿದೆ ಎಂಬುದನ್ನು ಅವಲೋಕಿಸುವುದೇ ಪ್ರಸ್ತುತ ಅಧ್ಯಯನದ ಆಯ್ಕೆಯ ವಿಷಯವಾಗಿದೆ. ಹೈದರಾಬಾದ ನಿಜಾಮನ ಆಳ್ವಿಕೆಯಿಂದ ಮುಕ್ತಗೊಳಿಸಬೇಕಾದರೆ. ನಮ್ಮ ಹೋರಾಟಗಾರರು ವಹಿಸಿದ ಕ್ರಮ ಕ್ರೀಯಾಶಿಲ ರೀತಿಯ ಪ್ರೇರಕ ಶಕ್ತಿಯನ್ನು ಹೊಂದಿತ್ತು. ಎಂದು ಅರಿಯಬಹುದು. ಭಾರತದಲ್ಲಿ ಹೈದರಾಬಾದ ಸಂಸ್ಥಾನವನ್ನು ವಿಲೀನಗೊಳಿಸಲು ಈ ತಾಲೂಕಿನಲ್ಲಿ ನಡೆದ ದೀರ್ಘಕಾಲವಧಿಯ ರಾಷ್ಟ್ರೀಯ ಚಳುವಳಿಯ ಕುರಿತು ಅನೇಕ ಗ್ರಂಥಗಳು ಇರುವುದಿಲ್ಲ. ಮುಖ್ಯವಾಗಿ ಐತಿಹಾಸಿಕ ಸಂಶೋಧನಾ ದೃಷ್ಟಿಯಿಂದ "ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಬೀದರ ತಾಲ್ಲೂಕಿನ ಒಂದು ಅಧ್ಯಯನ" ಎಂಬ ಈ ಪ್ರಬಂಧವನ್ನು ರಚಿಸಲಾಗಿದೆ.

## ಅಧ್ಯಯನದ ವಿಧಾನ

ಈ ಅಧ್ಯಯನವು ಪ್ರಾಥಮಿಕ ಮತ್ತು ಅನುಶ್ರೃಂಗಿಕ ಅಂಕಿ ಅಂಶಗಳ ಮಾಹಿತಿಯ ಮೇಲೆ ಅವಲಂಬನೆಯನ್ನು ಹೊಂದಿರುವುದು. ಪ್ರಾಥಮಿಕ ಅಂಶಗಳಲ್ಲಿ ಕೆಲವು ಸ್ವಾತಂತ್ರ್ಯ ಹೋರಟಗಾರರನ್ನು ಖುದ್ದಾಗಿ ಭೇಟಿಯಾಗಿ ವಿಷಯಗಳನ್ನು ಸಂಗ್ರಹಿಸಿ ತಾಳೆ ನೋಡಿ ಅಂಕಿ ಅಂಶಗಳನ್ನು ಅಧಿಕೃತವೆಂದು ನಿರ್ಧರಿಸಿದ ಮೇಲೆ ಇಡಿಯಾಗಿ ಗ್ರಂಥ ರಚನೆ ಮಾಡಬೇಕು. ಕೇವಲ ಅವರ ಅಲ್ಪಸ್ವಲ್ಪ ವಿಷಯಗಳನ್ನು ಸಂಗ್ರಹಿಸಿ ಪ್ರಬಂಧ ಬರೆಯುವುದು ಹೇಗೆ ಸಾಧ್ಯ ಎಂದು ಹೆದರಿಕೆಯಾಯಿತು. ಆ ಬಗೆಗೆ ಇರುವ ಗ್ರಂಥ ಸಾಮಗ್ರಿ ಅತ್ಯಲ್ಪ ಇಲ್ಲವೆಂದು ಒಪ್ಪುತ್ತೇವೆ. ಅಂದ ಮೇಲೆ ಒಂದು ಪ್ರಬಂಧ ಬರೆಯುವುದು ಸಾಧ್ಯವೇ, ಕಾರ್ಯಾರಂಭ ಮಾಡಿದ್ದಾಯಿತು. ನಿಲ್ಲಿಸಬಾರದೆಂದು, ನಿಶ್ಚಯಿಸಿ ಹೊಸತೊಂದು ಸಂಗ್ರಹಣೆಗೆ ದಾರಿ ತೋರಿದಂತಾಯಿತು.

ಪ್ರತಿಯೊಂದಕ್ಕೂ ಹೊಸದಾಗಿ ಸಂಶೋಧನೆ ಮಾಡಬೇಕಾಯಿತು. ಹಲವು ಜನ ಹಿರಿಯ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದ ಹೋರಾಟಗಾರರನ್ನು ಭೇಟಿಮಾಡಿದೆ. ಒಬ್ಬರಿಂದ ಮತ್ತೊಬ್ಬರ ಪರಿಚಯವಾಯಿತು. ಒಂದರಿಂದ ಮತ್ತೊಂದು ವಿಷಯದ ಈ ಸಂಪರ್ಕಸಿಕ್ಕಿತು. ಸಾಕಷ್ಟು ವ್ಯತ್ಯಾಸಗಳಿದ್ದವು ಎಲ್ಲವನ್ನು ತಾಳ್ಮೆಯಿಂದ ನೋಡಿ ಅಧಿಕೃತವಾದುದನ್ನು ಕಂಡು ಕೊಳ್ಳಬೇಕಾದರೆ ಸಾಕಷ್ಟು ಸಮಯ ಹಿಡಿಯಿತು ವಿಷಯ ಸಂಗ್ರಹಕ್ಕೆ ಸುಮಾರು ೪–೫ ತಿಂಗಳೇ ಬೇಕಾಯಿತು. ಮಾಹಿತಿ ಸಂಗ್ರಹಕ್ಕೆ ಅನುಸರಿಸಿದ ಕ್ರಮಗಳು ಕೆಳಗಿನಂತಿವೆ.

### ಚಳುವಳಿಗಾರರಿಂದ, ಸಂಬಂಧಪಟ್ಟ ಸರಕಾರಿ ಕಾರ್ಯಾಲಯಗಳಿಂದ ಪಡೆದ ಮಾಹಿತಿಗಳು

ವಿಷಯಕ್ಕೆ ಸಂಬಂಧಪಟ್ಟ ಬದುಕುಳಿದ ಚಳುವಳಿಗಾರರು ಮತ್ತು ಮರಣ ಹೊಂದಿದ ಮನೆತನದ ಸದಸ್ಯರಿಗೆ ಸಂಪರ್ಕಿಸಿ, ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದವರ ಹೋರಾಟಗಳ ಬಗ್ಗೆ ತಿಳಿದುಕೊಂಡವು. ಜಿಲ್ಲಾ ಕಛೇರಿ ಮತ್ತು ತಹಸೀಲ್ದಾರ ಕಛೇರಿಗಳಿಂದ ಹಲವಾರು ಮಾಹಿತಿಗಳನ್ನು ಸಂಗ್ರಹಿಸಿದೆನು. ಅವುಗಳೆಲ್ಲವು ವ್ಯವಸ್ಥಿತವಾದ ಮಾಹಿತಿಗಳಿರಲಿಲ್ಲ, ಇದರಲ್ಲಿನ ಮಾಹಿತಿಗಳು ನಿರೂಪಣೆಗೊಂಡ ನೆನಪುಗಳು, ಸುಮಾರು ವರುಷಗಳ ಘಟನೆಗಳಾಗಿದ್ದರಿಂದ, ಬಹುತೇಕ ಹೋರಾಟಗಾರರೆಲ್ಲರೂ ಇಳಿ ವಯಸ್ಸಿನವರಾಗಿದ್ದು ಜೀವನದ ಹಲವು ವರ್ಷಗಳ ಹಿಂದಿನ ಕಥೆಗಳನ್ನು ನನ್ನದುರಿಗೆ ಬಿಚ್ಚಿದಾಗ ಹಿಂದು ಮುಂದಾಗಿದ್ದು, ಅವುಗಳನ್ನು ಇತಿಹಾಸದ ಹಿನ್ನೆಲೆಯಲ್ಲಿ ಕಾಲಾನುಕ್ರಮಣಿಕೆ ರೀತಿಯಲ್ಲಿ ಸಂಯೋಜಿಸಿಲಾಗಿದೆ. ಪಾರದರ್ಶಕವಾದ ಸಂಶೋಧನೆಯನ್ನು ಕೈಗೊಳ್ಳಲು ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯ ಘನವೆತ್ತ ನಾಯಕರುಗಳಿಗೆ ನನ್ನ ವತಿಯಿಂದ ಅಳಿಲು ಗೌರವವನ್ನು ಸಲ್ಲಿಸಲು ಹಲವಾರು ಎಡರು –

– ತೊಡರುಗಳ ನಡುವೆ ಸ್ವಾತಂತ್ರ್ಯ ಏಕೀಕರಣ ಚಳುವಳೀಯಲ್ಲಿ ಭಾಗವಹಿಸಿದ ಹಾಗೂ ಆ ಕಾಲದಲ್ಲಿ ಜೀವಿಸಿದ ಪ್ರತ್ಯಕ್ಷದರ್ಶಿಗಳ ವಿವರಣೆಯನ್ನು ಪಡೆದು ಅವುಗಳಿಗೆ ಇಲ್ಲಿ ಪ್ರಾಶಸ್ತ್ಯ ನೀಡಲಾಗಿದೆ. ಇದಲ್ಲದೆ ಈ ಭಾಗದ ಹಲವಾರು ಹಿರಿಯರು ರಾಜಕೀಯ ಮುತ್ಸದಿಗಳು ಕವಿಗಳು ಪಂಡಿತರನ್ನು ಭೇಟಿಯಾಗುವುದರ ಮೂಲಕ ಅವರುಗಳಿಂದ ಪುಸ್ತಕದಲ್ಲಿರದಂತಹ ಹಲವಾರು ಐತಿಹಾಸಿಕ ಅಂಶಗಳನ್ನು ಕಲೆ ಹಾಕುವುದರ ಮೂಲಕ ಈ ಸಂಶೋದನೆಗೆ ವೈಜ್ಞಾನಿಕತೆಯನ್ನು ಒದಗಿಸಲಾಗಿದೆ.

ಈ ಅಧ್ಯಯನದ ಮುಖ್ಯ ಉದ್ದೇಶ ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಟಗಾರರ ಪಾತ್ರ, ಅವರ ಧೈರ್ಯ, ಸಾಹಸ ಸಮಯ ಸ್ಪೂರ್ತಿ, ದೇಶ ಪ್ರೇಮ ತಾಳ್ಮೆ, ತ್ಯಾಗ ಬಲಿದಾನ ಇವುಗಳನ್ನು ಬೆಳಕಿಗೆ ತರಬೇಕೆಂದು ಕಾತುರವಿದ್ದ ನನ್ನ ಮನಸ್ಸಿನ್ನು ಅರಿತಂತೆ ಅವರಿದ್ದ ಸ್ಥಳಕ್ಕೆ ಹೋಗಿ ಬೇಟಿಯಾಗಿ ಮಾತಾನಾಡಿಸಿದ್ದೇನೆ. ತಾವಾಗಿಯೇ ಹೇಳಿದ ಅವರ ಅನುಭವ ಅವರ ತ್ಯಾಗ ಜೀವನ ಕಣ್ಣೆದರು ಚಲಿಸಿದಂತೆ ವಿವರಿಸಿದರು.

ಅವರಿಂದ ನಾನು ಕಲಿತ ವಿಷಯ ಅಪಾರ. ಈ ಎಲ್ಲ ಮಾಹಿತಿ ತಿಳಿಯಲು ಕ್ಷೇತ್ರ ಅಧ್ಯಯನಕ್ಕೆ ಒತ್ತು ಕೊಟ್ಟು ಸಂಶೋಧನೆ ಮಾಡಲಾಗಿದೆ.

**ವ್ಯಾಪ್ತಿ:**

ಈ ಅಧ್ಯಯನವನ್ನು ಕ್ರಮಬದ್ಧವಾಗಿ ೯ ಪ್ರದಾನ ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ ಶೀರ್ಷಿಕೆಯಲ್ಲಿ ಸ್ವಾತಂತ್ರ್ಯವೆಂದರೇನು? ಅರ್ಥ ಮತ್ತು ವ್ಯಾಖ್ಯೆಗಳು ಹಾಗೂ "ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯ ಕುರಿತು" ಅಧ್ಯಯನದ ಉದ್ದೇಶ ಮತ್ತು ವಿಧಾನ ಹಾಗೂ ವ್ಯಾಪ್ತಿಯ ಪ್ರಮುಖ ಅಂಶಗಳನ್ನು ಒಳಗೊಂಡಿರುತ್ತದೆ.

ಎರಡನೆಯ ಅಧ್ಯಾಯದಲ್ಲಿ ತಾಲ್ಲೂಕಿನ ಭೌಗೋಳಿಕತೆ ಐತಿಹಾಸಿಕ ಹಿನ್ನಲೆ ಹಾಗೂ ಕಲೆ, ಸಾಹಿತ್ಯ ಪ್ರಸಿದ್ಧತೆಯನ್ನು ಕುರಿತು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬೀದರ ತಾಲ್ಲೂಕಿನಲ್ಲಿ ರಾಷ್ಟ್ರೀಯತೆ ಉಗಮ ಮತ್ತು ಬೆಳವಣಿಗೆಗೆ ಪ್ರೇರಕವಾದ ಅಂಶಗಳು ಯಾವುವು ಮತ್ತು ಅವುಗಳ ಪಾತ್ರದ ಬಗ್ಗೆ ವಿವರಿಸವಾಗಿದೆ.

ನಾಲ್ಕನೇಯ ಅಧ್ಯಾಯದಲ್ಲಿ ಬ್ರಿಟಿಷ ಮತ್ತು ನಿಜಾಮನ ವಿರುದ್ಧ ಬೀದರ ತಾಲ್ಲೂಕಿನ ಹೋರಾಟವನ್ನು ವಿವರಿಸಲಾಗಿದೆ.

ಐದನೇಯ ಅಧ್ಯಾಯದಲ್ಲಿ ಹೈದರಾಬಾದ ಸಂಸ್ಥಾನದಲ್ಲಿ ಅದರಲ್ಲೂ ಬೀದರ ತಾಲ್ಲೂಕಿನಲ್ಲಿ ಸಂಬವಿಸಿದ ರಜಾಕಾರರ ಹಾವಳಿ ಮತ್ತು ಅತಿ ಪ್ರಮುಖವಾದ ಘಟನೆಗಳನ್ನು ವಿವರಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ೧೯೪೮ ರಲ್ಲಿ ನಡೆದ ಪೋಲಿಸ ಕಾರ್ಯಾಚರಣೆಯ ವಿವರ ಮತ್ತು ಬೀದರನ ಸ್ವಾತಂತ್ರ್ಯ ಹೋರಾಟಗಾರರು ಯಾವ ರೀತಿಯಾಗಿ ತಮ್ಮ ಸ್ವ-ಇಚ್ಛೆಯಿಂದ ತನು-ಮನು-ಧನ ದಿಂದ ಸೇವೆಯನ್ನು ಸಲ್ಲಿಸಿದರು ಎಂಬುದನ್ನು ವಿವರಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಕರ್ನಾಟಕ ಏಕೀಕರಣದ ಹಂತಗಳನ್ನು ಮತ್ತು ಈ ಏಕೀಕರಣದಲ್ಲಿ ಬೀದರ ತಾಲ್ಲೂಕಿನ ಹೋರಾಟಗಾರರ, ಹೋರಾಟವನ್ನು ವಿವರಿಸಲಾಗಿದೆ.

ಎಂಟನೇ ಅಧ್ಯಾಯದಲ್ಲಿ ಬೀದರ ತಾಲ್ಲೂಕಾ ಸ್ವಾತಂತ್ರ್ಯ ಹೋರಾಟಗಾರರ ಬದುಕಿನ ಚಿತ್ರಣ. ಅವರ ಹೋರಾಟದ ಜೀವನ ಮತ್ತು ಮಾಡಿ ಮಡಿದವರು, ಮಾಡಿ ಬದುಕುಳಿದವರ ಕುರಿತು ವಿವರಣೆ, ಅವರ ಹೋರಾಟದ ಪ್ರತಿಫಲ ಕುರಿತು ವಿವರಿಸಲಾಗಿದೆ.

ಒಂಬತ್ತನೇ ಅಧ್ಯಾಯದಲ್ಲಿ ಉಪಸಂಹಾರ ವಿಷಯದ ತಾರ್ಕಿಕ ರೀತಿಯ ವಿಮರ್ಶೆ, ಸಂಶೋಧನಾ ಅನುಭವದ ಕುರಿತು ವಿವರಿಸಲಾಗಿದೆ.

## ಅಡಿಟಿಪ್ಪಣಿಗಳು

೧. ಮಹಾಬಲೇಶ್ವರಪ್ಪಾ ಬಿ.ಸಿ ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು
ಪು – ೧೩೧

೨. ಭರತೇಶ.ಶಿ.ಶಿರಿಯಪ್ಪ ಗೌಡ– ನರಗುಂದ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಚಳುವಳಿಯ ಒಂದು ಅಧ್ಯಯನ
ಕರ್ನಾಟಕ ವಿಶ್ವ ವಿದ್ಯಾಲಯ ಪು – ೧

೩. ಮಾರಪ್ಪ.ಡಿ.ಪಿ. 'ಗಾಂಧೀವಿಚಾರವಾಹಿನಿ' (ಆರಿಸಿಕೊಂಡ ಅಣಿ ಮುತ್ತುಗಳು) ಬೇಂಗಳೂರು, ೧೯೯೪
ಪು – ೨೯.

೪. ದೀಕ್ಷಿತ ಅನುರಾಧ .ಯು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜನಪದ ಗೀತೆಗಳ ಮೂಳಕ ರಾಷ್ಟ್ರೀಯ ಭಾವನೆಗಳ ಸಂಹವನ. ಉತ್ತರ ಕರ್ನಾಟಕದ ಒಂದು ಅಧ್ಯಯನ
ಕ.ವಿ.ವಿ ಪಿ.ಎಚ್.ಡಿ. – ಪ್ರಬಂಧ. ಪು – ೧೦೪.

೫. ಸ್ವಾಟ ನಿಯರಿಂಗ್ ಅನುವಾದ ಎಸ್.ವೆಂಕಟಛಲಪತೆ "ಸ್ವಾತಂತ್ರ್ಯ ಮೀಮಾಂಸೆ" ಮೈಸೂರು ವಿ.ವಿ.– ಮೈಸೂರು ಪು – ೨೪೩.

೬. ಉಮಾಪತಿ : 'ನುಡಿಮುತ್ತು' 'ಸುದರ್ಶನ ಪ್ರಕಾಶನ' ಸಂ–೧ ಪು –೧–೨

೭. ದಿವಾಕರ ಆರ್.ಆರ್ ಸತ್ಯಾಗ್ರಹ ಪು – ೧

೮. ಅಶ್ವತಪ್ಪಾ ಕೆ.ಎನ್. ಇತಿಹಾಸ ದ್ವಿತಿಯ ಪಿ.ಯು.ಸಿ. ಪು – ೩೭೦

# ಅಧ್ಯಾಯ – ೨

# ಬೀದರ ತಾಲ್ಲೂಕಿನ ಭೌಗೋಳಿಕ ಹಿನ್ನಲೆ ಮತ್ತು ಐತಿಹಾಸಿಕ ಹಿನ್ನಲೆ

ಕರುನಾಡಿನ ಮುಕುಟವಾಗಿರುವ ಬೀದರ ತನ್ನದೇ ಆದ ಭವ್ಯ ಪರಂಪರೆ, ಸಾಹಿತ್ಯ, ಸಂಸ್ಕೃತಿ, ಕಲೆ ಇತಿಹಾಸ ಗತ ವೈಭವದಿ ಜಗತ್ತಿಗೆ ಶತಶತಮಾನಗಳಿಂದ ಸುಗಂಧ ಸೂಸುತ್ತಿರುವುದು ಬೀದರಿನ ಹಿರಿಮೆ. ಹಿರಿದಾದಷ್ಟು ಕರ್ನಾಟಕದಲ್ಲಿಯೇ ಭೂ ಪ್ರದೇಶ ಕಡಿಮೆಯುಳ್ಳದ್ದು, ಆದರು ಸರ್ವಧರ್ಮ ಸಮನ್ವಯ ಬಾಳ್ವೆಯ ನೆಲೆ ಬೀಡಾಗಿದೆ ಕಾಲಾನುಕಾಲ ಗತಿಸಿದಂತೆ ನಮ್ಮ ನಾಗರಿಕತೆಯು ಸಾಹಿತ್ಯದ ಕಡೆಗೆ ಹೆಜ್ಜೆ ಹಾಕಿದಷ್ಟು ಹಿಂದುಳಿದ ಜಿಲ್ಲೆಯಾಗಿರುವುದು ಇಂದಿನ ರಾಜಕೀಯ ವ್ಯವಸ್ಥೆ ದುರುತವಾದರು ಜಿಲ್ಲೆಯಲ್ಲಿಯೇ ಬೀದರ ಜಿಲ್ಲಾ ಕೇಂದ್ರವಾಗಿರುವುದರಿಂದ ಇತರ ೪ ತಾಲ್ಲೂಕಗಳಿಗಿಂತ ಅಭಿವೃದ್ಧಿಹೊಂದಿದೆ. ತಾಲೂಕ ನೊಂದಿಗೆ ಹಿಂದೂ–ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯದ ಕೇಂದ್ರ ಬೀದರ ಕಲೆಯ ತವರೂರು (೧) ಅನೇಕ ಅರಸುಮನೆತನಗಳ ರಾಜಧಾನಿಯಾಗಿ. ಆರ್ಥಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ರಂಗದಲ್ಲಿ ಜಗತಪ್ರಸಿದ್ಧಿಯನ್ನುಗಳಿಸಿದ ಬೀದರ. ನಿಜಾಮನ ಆಡಳಿತ ಕೊನೆಗೊಂಡ ನಂತರ ಕನ್ನಡ ನಾಡಿನ ಧಾರ್ಮಿಕ ಸಾಂಸ್ಕ್ರತಿಕ ಪರಂಪರೆಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವುದು ಅನೇಕ ತಾಲ್ಲೂಕಗಳ ಪೈಕಿ ಬೀದರ ಸಹ ಒಂದು. ಹೀಗೆ ವಿವಿಧತೆಯಲ್ಲಿ ಏಕತೆ ಸಾಧಿಸಿ, ಸಾಂಸ್ಕ್ರತಿಕ ಪರಂಪರೆಯನ್ನು ಹೊಂದಿರುವ ತಾಲ್ಲೂಕು ಬೀದರ ಆಗಿದೆ.

**ಐತಿಹಾಸಿಕ ಹೆಸರುಗಳು :**

**ವಿದುರನಿಂದ ಬೀದರ:**

ರಾಮ–ಸೀತೆಯರು ಬೀದರಿನ ಪಾಪನಾಶ ದೇವಸ್ಥಾನದ ಹತ್ತಿರ ನೆಲೆಸಿದ್ದು ದಂತ ಕತೆಗಳಲ್ಲೊಂದು. ರಾಮಾಯಣ ಕಾಲದಷ್ಟು ಇದರ ಪ್ರಾಚೀನತೆ ಶ್ರೇಷ್ಠವಾದ ನಾಗರೀಕತೆಗೆ ಹೆಸರುವಾಸಿ. ಪೌರಾಣಿಕವಾಗಿ ಬೀದರ ವಿದುರ ನಗರವೆಂದು ಕರೆಯಲ್ಪಡುತ್ತಿತ್ತು. ಮಹಾಭಾರತ ಕಾಲದಲ್ಲಿ ನಳ–ದಮಯಂತಿಯರ ಪ್ರಖ್ಯಾತ ಪ್ರೇಮಾಯಣದ ರಮ್ಯನಗರಿ ಪ್ರಣಯದ ಉದ್ಯಾನವೆಂತಲೂ ಪ್ರತೀಕಾಲ ಕಾಲಕ್ಕೆ ಅನೇಕ ಹೆಸರುಗಳಿಂದ ಪ್ರಸಿದ್ದಿ ಪಡೆದ ಬೀದರ ಇದರ ಮೂಲ ಶಬ್ದ ಬಿದಿರು ಬಿದರೆ ಅಂದರೆ ಬಿದಿರು ಬೆಳೆಯುವ ಪ್ರದೇಶ ಅದಕ್ಕಾಗಿಯೇ ಬಿದಿರೆ – ಬಿದರಿಪುರ – ಬೀದರೂರು – ಬೀದರೆ ಎಂಬ ಹೆಸರುಗಳು ಎಂದು ೧೫ನೇ ಶತಮಾನದ ಕನ್ನಡ ಮರಾಠಿ ಗ್ರಂಥಿಗಳಲ್ಲಿ ಉಲ್ಲೇಖವಿದೆ.

ಬಹುಮನಿ ಮುಸ್ಲಿಂ ಅರಸರ ಕಾಲದಲ್ಲಿ ಅಹಮ್ಮದಾಬಾದ ಬೀದರ ಮೊಹಂಮ್ಮಾದಾಬಾದ - ಬೀದರ ಹಾಗೂ ಔರಂಗಜೇಬನ ಕಾಲದಲ್ಲಿ ಇದು ಜಫರಬಾದ ಬೀದರ. ಜಾನಪದಿಯಲ್ಲಿ ಧರಿ-ಕ್ವಾಟೀ ಎಂದು ಹೆಸರು ಹೊಂದಿ ಸದ್ಯಕ್ಕೆ ಬಿದಿರು ಗಿಡ(ಕಾಡು) ಇಲ್ಲದ ಬೀದರ ಹೆಮ್ಮರವಾಗಿದೆ.

**ಭೌಗೋಳಿಕ ಪರಿಚಯ:**

ಬೀದರ ಉಪವಿಭಾಗದೊಂದಿಗೆ ಜಿಲ್ಲಾ ಕೇಂದ್ರ ಸ್ಥಾನವಾಗಿರುವುದುರಿಂದ ಜಿಲ್ಲೆಯ ಭೂಪಟದಲ್ಲಿ ಪೂರ್ವಭಾಗದಲ್ಲಿದೆ. ನಗರದಿಂದ ೮-೯ ಕಿ.ಮೀ ದೂರದಲ್ಲಿಯೇ ಆಂದ್ರಪ್ರದೇಶದ ಮೇದಕ ಜಹಿರಾಬಾದ ಮತ್ತು ನಾರಾಯಣಖೇಡ ತಾಲ್ಲೂಕಿನ ಸೀಮೇಗೆ ಹತ್ತಿಕೊಂಡಿದೆ. ತೆಲುಗು ಮರಾಠಿ, ಉರ್ದು ಹಿಂದಿ ಭಾಷೆಗಳು, ಪ್ರಭಲತೆಯಲ್ಲೂ ಕನ್ನಡತನ ಅಳಿಸದಂತೆ ಉಳಿಸಿಕೊಂಡಿರುವುದೇ ವೈಶಿಷ್ಟ್ಯತೆಯಲ್ಲೊಂದು, ಅಂದರೆ ಅತಿಶೋಯಕ್ತಿಯಾಗದು. ಆನವಾಡ, ಮಾಳೆಗಾಂವ, ಹಳ್ಳದಕೇರಿ, ಕಮಠಾಣ ಮನ್ನಳ್ಳಿ, ಬಗದಲ ಆರು ಕಂದಾಯ ಹೋಬಳಿಗಳಾಗಿ ವಿಂಗಡನೆಗೊಂಡ ಬೀದರ ನಗರ ಸಭೆಯನ್ನು ಹೊಂದಿದೆ.

ಇದರ ವಿಸ್ತೀರ್ಣ ೯೨೬, ಚ.ಕಿ.ಮೀನಲ್ಲಿ ೧೨೮ ಜನವಸತಿ ಇರುವ ಗ್ರಾಮಗಳು ಹಾಗೂ ೧೯ ಜನವಸತಿ ಇಲ್ಲದ ಗ್ರಾಮಗಳುಳ್ಳ ಬೀದರನಲ್ಲಿ ೩೩೧೪೫೨ ಜನ ವಾಸಿಸುತ್ತಾರೆ. ಬೀದರ ತನ್ನ ಗರ್ಭದಲ್ಲಿ ಜಂಬು ಕಲ್ಲಿನ ಮಿಶ್ರಣವುಳ್ಳ ಕೆಂಪು ಕಲ್ಲನ್ನು ಹುದುಗಿಸಿಕೊಂಡಿದ್ದು. ಕೆಂಪು ಕಪ್ಪು ಬಣ್ಣದ ನೆಲವಿರುವ ಬೀದರ ಸಮುದ್ರ ಮಟ್ಟದಿಂದ ೭೭೬ ಕಿ.ಮೀ ಎತ್ತರದಲ್ಲಿದೆ.

**ಹವಾಗುಣ-ಮಳೆ:**

ಬೀದರ ಸಮತೋಲನವಾದ ಹವಾಗುಣ ಹೊಂದಿದ್ದು ಒಣಹವೆಯಿಂದ ಕೂಡಿರುತ್ತದೆ. ಗರಿಷ್ಠ ಉಷ್ಣಾಂಶ ೩೧ ಮತ್ತು ಕನಿಷ್ಠ ೨೧ ಡಿಗ್ರಿ ಸೆಂಟಿಗ್ರೇಡ ಇರುತ್ತದೆ. ಬೇಸಿಗೆಯ ಕೊನೆಯ ತಿಂಗಳಲ್ಲಿ ಉಷ್ಣಂಶ ೪೩ ಡಿಗ್ರಿ ಸೆಂಟಿಗ್ರೇಡದವರೆಗೆ ಇರುತ್ತದೆ. ಅತಿ ಎತ್ತರದ ಗುಡ್ಡ ಬೆಟ್ಟಗಳಿಲ್ಲದ ವಿಶಾಲವಾದ ಪ್ರದೇಶಗಳಿಂದ ಕೂಡಿದ ಇದು ದಖ್ಖನ ಪ್ರಸ್ಥಭೂಮಿಯ ಶ್ರೇಷ್ಠ ಭಾಗವಾಗಿದೆ. ತಾಲ್ಲೂಕಿನಲ್ಲಿ ಸಾಧಾರಣವಾಗಿ ಮಳೆಯು ಜೂನ-ಸೆಪ್ಟೆಂಬರ ತಿಂಗಳನಲ್ಲಿ ಬೀಳುತ್ತದೆ. (೧೯೯೦-೧೯೭೦) ೮೪೭.೦ ಮಿ.ಮಿ. ಇದ್ದು ೧೯೯೬-೯೭ನೇ ಸಾಲಿನಲ್ಲಿ ೯೨೯.೦ ಮಿ.ಮಿ. ೨೦೦೦ ರಲ್ಲಿ ೯೪೦. ಮಿ.ಮಿ.ವಾಡಿಕೆ ಮಳೆ. ಈ ತಾಲ್ಲೂಕಿನಲ್ಲಿ ೧೦, ವೃಷ್ಟಿಮಾಪಕ ಕೇಂದ್ರಗಳಿದ್ದು ಮಳೆಯ ಪ್ರಮಾಣ ಅಳೆಯಲು ಸಹಾಯವಾಗುತ್ತದೆ. ಸರಾಸರಿ ೪೨ ದಿನ ಮಳೆಯಾಗುತ್ತದೆ.

**ನದಿ – ಕಾಡು:**

ಬೀದರ ತಾಲ್ಲೂಕಿನ ಅಧೀನದೊಳಗೆ ಹರಿಯುವ ಏಕೈಕ ನದಿ ಮೂಂಜ್ರಾನದಿಯಾಗಿದೆ. ಈ ನದಿ ಗೋದಾವರಿ ನದಿಯ ಉಪನದಿಯಾಗಿದ್ದು, ಮಹಾರಾಷ್ಟ್ರದಿಂದ, ಆಂಧ್ರಕ್ಕೆ ಅಂದರೆ ಪಶ್ಚಿಮದಿಂದ. ಪೂರ್ವದ ಮದ್ಯೆ ಬೀದರ ತಾಲ್ಲೂಕಿನ ಯರನಳ್ಳಿ ಇಸ್ಲಾಂಪುರು ಚಿಮಕೋಡ, ಚಿಲ್ಲರ್ಗಿ ಮುಖಾಂತರ ಹಾದು ಹೋಗುತ್ತದೆ. ಪೌರಾಣಿಕಗಳಲ್ಲಿ ಮಂಜಳವೆಂದು ಹೆಸರುವಾಸಿ ಈ ನದಿಗೆ ಕಾರಂಜಾ ಉಪನದಿಯಾಗಿದೆ. ಈ ಕ್ಷೇತ್ರದಲ್ಲಿ ಹೇಳಿಕೊಳ್ಳುವಂಥ ಬೆಟ್ಟಗಳಿಲ್ಲದಿದ್ದರೂ. ಪಾಪನಾಶ, ನರಸಿಂಹ ಝುರಾ, ಗುರುನಾನಕರ ಝುರಾ ನಾವದಗೇರಿ ಮತ್ತು ಹೊನ್ನಿಕೇರಿ ಬಳಿ ಸ್ವಲ್ಪ ಮಟ್ಟಿನ ಎತ್ತರ ಪ್ರದೇಶಗಳು ಬೆಟ್ಟಗಳಂತೆ ಮನರಂಜಿಸುತ್ತವೆ.

ಬೀದರನಲ್ಲಿ ದಟ್ಟವಾದ ಕಾಡು ಅತಿ ಎತ್ತರದ ಮರಗಳು ಸಿಗುವುದು ಕಷ್ಟವಾದರೂ ಇತ್ತೀಚಿನ ದಿನಗಳಲ್ಲಿ ಅರಣ್ಯ ಇಲಾಖೆಯವರ ಕೃಪೆಯಿಂದ ಆಂಧ್ರದ ಸೀಮೆ ಬಳಿ ಮತ್ತು ಹೊನ್ನಿಕೇರಿ ಬಳಿ ಸುಮಾರು ೪೬೫೫ ಹೆಕ್ಟರನಲ್ಲಿ ಕಾಡು ಬೆಳೆಸಲಾಗಿದೆ.

**ಬೀದರ ಇತಿಹಾಸ:**

ಕ್ರಿ.ಪೂ ಮೂರನೆಯ ಶತಮಾನದಲ್ಲಿ ಇಡೀ ದಕ್ಷಿಣ ಪ್ರಥಮ ಸಾಮ್ರಾಟ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು. ಮೌರ್ಯರ ನಂತರ ಶಾತವಾಹನರು ದಕ್ಷಿಣ ಭಾತರದ ಮೇಲೆ ಅಧಿಕಾರ ಸ್ಥಾಪಿಸಿದರು. ನಂತರ ಬಂದ ಪ್ರಭಾವಶಾಲಿ ಮನೆತನಗಳಲ್ಲಿ ಕ್ರಿ.ಶ ಆರನೆಯ ಶತಮಾನದ ಬಾದಾಮಿ ಚಾಲುಕ್ಯರು ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟರಿಂದ ಪರಾಭವಗೊಂಡರು ೯೭೩ ರಲ್ಲಿ ಚಾಲುಕ್ಯರು ಅಧಿಕಾರಕ್ಕೆ ಬಂದ ಮೊದಲು ಮಳಖೇಡದಿಂದ ಆ ಮೇಲೆ ಕಲ್ಯಾಣದಿಂದ ಆಳಿದರು. ಹಲವು ವರ್ಷ ಕಲಚೂರಿಗಳ ಆಡಳಿತವಿತ್ತು. ಮುಂದೆ ಪುನಃ ೧೧೮೪ ರಿಂದ ೧೨೦೦ ರವರೆಗೆ ಚಾಲುಕ್ಯರೆ ಆಳಿದರು. ಆನಂತರ ದೇವಗಿರಿಯ ಸೆವುಣರ ವಶಕ್ಕೆ ಹೋಯಿತು ಸೆವೂಣರಿಗೂ ದ್ವಾರ ಸಮುದ್ರದ ಹೊಯ್ಸಳರಿಗೂ ಹಾಗೂ ವಾರಂಗಲಿನ ಕಾಕತೀಯರಿಗೂ ೧೨೯೪ ರಲ್ಲಿ ಘರ್ಷಣೆಗಳಾದವು.

ಬೀದರ ಭಾಗವು ಹಿಂದೂ ಅರಸರ ಅಧೀನದಲ್ಲಿದ್ದಾಗ ಕಟ್ಟಲ್ಪಟ್ಟಿದ್ದರೂ ಬಹುಮನಿಯ ಕಾಲದಲ್ಲಿ ಪ್ರಸಿದ್ಧಿ ಪಡೆಯಿತು ಈ ಭಾಗ ಕಾಕತಿಯರ ಕಾಲದಲ್ಲಿ ಕಟ್ಟಿದು ಬಸತೆ ಹಯಾತ ಎಂಬ ಉರ್ದುವಾರ ಪತ್ರಿಕೆ (೨-೯-೧೯೮೬) ರಂದು ಉಲ್ಲೇಖಿಸಿದ ಹಾಗೇಯೇ ಬಷರೋದ್ದೀನ ಇತಿಹಾಸಕಾರನು ಚೌಬಾರ ಗೊಪುರವು ಹಿಂದು ಅರಸರ ಕಾಲದಲ್ಲಿ ಕೆಟ್ಟಲಾಗಿದೆ. ಎಂದು ಹೇಳಿದರೆ ಇನ್ನೋರ್ವ ಯಜದಾನಿ ಎಂಬ ಬೀದರಿನ ಇತಿಹಾಸ ಬರೆದ ಲೇಖಕ ಮುಸ್ಲಿಂಮರ ಆಡಳಿತ ಪೂರ್ವ ಚೌಬಾರ ಇತ್ತು ಎಂದು ಹೇಳಿದ್ದನು ಅವಲೋಕಿಸಿದಾಗ ಬಹುಮನಿ ಸಾಮ್ರಾಜ್ಯ ಗುಲಬರ್ಗಾದಿಂದ ಬೀದರಕ್ಕೆ ವರ್ಗಾಯಿಸಲು ಮೂಲಕಾರಣಲಾಗಿರ ಬೇಕೆಂದಿನಿಸುತ್ತದೆ. ಗವಾನ ೧೪೭೨ರಲ್ಲಿ ಕಟ್ಟಿದ್ದಾಗಿದೆ. ಆದರೆ ಚೌಬಾರ ಗೋಪುರ ಅದಕ್ಕೆ ಇನ್ನು ಪೂರ್ವ ೨೦೦ ವರ್ಷ ಹಳೆಯದು ಎಂಬ ಉಲ್ಲೆಖ ಇಂದಿನ ಸಂಶೋಧನೆಗೆ ಅನುವ ಮೂಡಿಕೊಡುತ್ತದೆ. ಹಾಗೂ ಈಗಿರುವ ಬಹುಮನಿ ಕೋಟೆ ಹಿಂದೂ ಅರಸರ ಕೋಟೆಯನ್ನೆ ಭವ್ಯವಾಗಿ ಕಟ್ಟಿ ಅಭಿವೃದ್ಧಿಪಡಿಸಲಾಗಿದೆ. ಎಂಬ ದಾಖಲೆಗಳ ಆಧಾರವಾಗಿದ್ದರಿಂದ ಈ ನಿಟ್ಟಿನಲ್ಲಿ ಸಂಶೋದಕರಿಂದ ಹೆಚ್ಚಿನದನ್ನು ನಿರೀಕ್ಷಿಸಲಾಗಿದೆ. ಆದರೆ ಯಾರು ಗಮನ ಹರಿಸುತ್ತಾರೆ. ಸಮಯವೇ ಹೇಳಬಲ್ಲದು.

## ದೆಹಲಿ ಸಾಮ್ರಾಟ:

ದೆಹಲಿ ಸಾಮ್ರಾಟ್ ಅಲ್ಲಾಉದ್ದಿನ ಅಟ್ಟಹಾಸದ ಅಕ್ರಮಗಳಿಗೆ ಕಾಕತಿಯರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಮುಸ್ಲಿಂ ಆಡಳಿತಕ್ಕೆ ದಾರಿ ಮಾಡಿಕೊಟ್ಟರು.

## ೧೩೨೫ರಲ್ಲಿ ಮಹಮ್ಮದ ಬಿನ್ ತುಘಲಕ:

ಮಹಮ್ಮದ ಬಿನ್ ತುಘಲಕನು ದೆಹಲಿ ಸಾಮ್ರಾಟನಾದ ಅಲ್ಲಾವುದ್ದೀನನ್ನು ಸೋಲಿಸಿ ತನ್ನ ಅಧಿಕಾರದ ಅಧಿಪತ್ಯ ಆರಂಭಿಸಿದ ತುಘಲಕನ ಸಾಮ್ರಾಜ್ಯ ವಿಶಾಲವಾದಷ್ಟು ಆತನ ಆಡಳಿತ ಅನೀತಿ, ಅನ್ಯಾಯ ದೌರ್ಜನು, ದರ್ಪಗಳಿಂದ ತುಂಬಿ ತುಳುಕಾಡುತ್ತಿತ್ತು. ಇವನ ಅಟ್ಟಹಾಸ ಸಹಿಸಿದ ಅಧಿಕಾರ ಅಮೀರರು, ಸರದಾರರು, ಪ್ರಾಂತಾಧಿಕಾರಿಗಳು ದಂಗೆಗಳನ್ನು ಆರಂಭಿಸಿದರು ದಕ್ಷಿಣದ ಭಾಗವಾದ ಬೀದರನಲ್ಲಿ ತಾಜುಲ ಮುಲ್ಕನ ಸಕತ್ ಶಾಹನೊಂದಿಗೆ, ಗುಲಬರ್ಗಾ ಅಲಷಾ ಸಾಗರನಾಡಿನ ಬಾಹುದಿನ್ ಸೇರಿದರು. ಈ ದಂಗೆಕೋರರು ಸದೆಬಡೆಯಲು ಪ್ರಯತ್ನಿಸಿದಾಗ ದೌಲತಾಬಾದ ಸೇರಿದರು. ಅಲ್ಲಿನ ಅಧಿಕಾರಿ ಅಮಿತ್ ಉಲ್ ಮುಲನು ಎಲ್ಲಾ ದಂಗೆಕೋರರನ್ನು ಒಂದುಗೂಡಿಸಿ ಸುಲ್ತಾನನ ಆದೇಶದಂತೆ ಉತ್ತರಕ್ಕೆ ಕಳುಹಿಸಿದನು. ರಸ್ತೆಯಲ್ಲಿ ಎಲ್ಲರಿಗೂ ಸಂಶಯ ಉಂಟಾಗಿ, ದೌಲತಾಬಾದನ್ನು ಮುತ್ತಿ ಅಮಿತ್-ಉಲ್ ಮುಲ್ಕನನ್ನು ಬಂದಿಸಿದನು. ಈ ಘಟನೆಯು ನೇತೃತ್ವ ಮಲಿಕಿಸ್ಮಾಯಿಲ. ವಹಿಸಿದ್ದರಿಂದ ಅವನನ್ನು ಅರಸನ್ನಾಗಿಸಿದರು. ಇದೇ ಸಂದರ್ಭದಲ್ಲಿ ದೆಹಲಿಯಲ್ಲಿ ಅನೇಕ ದಂಗೆಗಳು ಆರಂಭವಾದವು ಸುಲ್ತಾನ ಈ ಭಾಗ ನಿರ್ಲಕ್ಷಿಸಿದ ಮಲ್ಲಿಕ ಇಸ್ಮಾಯಿಲ ವೃದ್ದನಾಗಿ ತನ್ನ ಸ್ಥಾನಕ್ಕೆ ರಾಜೀನಾಮೆ ಕೊಟ್ಟ, ದೌಲತಾಬಾದ ದಂಗೆಯಲ್ಲಿ ಪ್ರಮುಖ ಪಾತ್ರವಹಿಸಿದ ಹಸನ ಎಂಬ ಯೋದನನ್ನು ನಾಯಕನನ್ನಾಗಿ ಆರಿಸಲಾಯಿತು. ಹಸನನ್ನು ಕ್ರಿ.ಶ ೧೩೪೭ರ ಅಗಸ್ಟನಲ್ಲಿ ಅಲ್ಲಾಉದ್ದಿನ ಹಸನ್ ಬಹುಮನಶಹ ಎಂಬ ಬಿರುದನಿಂದ ಬಹುಮನಿ ರಾಜ್ಯವನ್ನು ಗುಲಬರ್ಗಾದಲ್ಲಿ ಸ್ಥಾಪಿಸಿದನು.

## ಬಹುಮನಿ ಸಾಮ್ರಾಜ್ಯ:

ಕ್ರಿ.ಶ ೧೩೪೭ರಲ್ಲಿ ಅಲ್ಲಾವುದ್ದಿನ ಹಸನಗಂಗು ಬಹಮನ್‌ಷಾಹನಿಂದ ಜನ್ಮತಾಳಿದ ಗುಲಬರ್ಗಾ ನಗರದಲ್ಲಿ ದೀರ್ಘಕಾಲದ ನಂತರ ಅಂದರೆ ಕ್ರಿ.ಶ ೧೪೨೪ರಲ್ಲಿ ಮಹ್ಮದಷಾಹನ ಆಳ್ವಿಕೆಯ ಸಮಯದಲ್ಲಿ ಬೀದರಕ್ಕೆ ವರ್ಗವಾಗಿ ನೆಲೆಮಾರಿದ.

ಕೆಟ್ಟ ವರ್ತನೆಯಿಂದ ಜಾಲಿಂ ಎಂದು ಕರೆಸಿಕೊಂಡನು. ಇವನ ಮಾನವಿಯತೆಗೆ ಬೆಸತ್ತು ಸೈನಿಕನೆ ಕೊಂದದ್ದು. ಬೀದರ ಕಾಲಾನು ಕಾಲದಿಂದಲೂ ಮಾನವಿಯತೆಗೆ ಪ್ರತಿಗೆ ಪ್ರಾಮುಖ್ಯತೆ ಕೊಟ್ಟಿದೆ ಎಂಬುದು ತಿಳಿದುಬರುತ್ತದೆ.

**ಮೂರನೆಯ ಮಹಮ್ಮದ ಷಾಹ:**

ಅಧಿಕಾರವನ್ನು ವಹಿಸಿಕೊಂಡಾಗ ಎಳೆವಯಸ್ಸಿನವನಾಗಿದ್ದನು. ಇವನ ಕಾಲದಲ್ಲಿ ದಕ್ಷ ಹಾಗೂ ಪ್ರಾಮಾಣಿಕ ಸಮರ್ಥ ಪ್ರಧಾನ ಮಂತ್ರಿಯಾಗಿ ಅಧಿಕಾರವನ್ನು ವಹಿಸಿಕೊಂಡನು ಮಹಮ್ಮದ ಗವಾನ.

**ಮಹಮ್ಮದ ಗವಾನ:**

ಇರಾನ ರಾಷ್ಟ್ರದ ಗಿಲಾನ ಪ್ರಾಂತದ ಗವಾನ ಎಂಬ ಹಳ್ಳಿಯಲ್ಲಿ ಜನಿಸಿ ಕ್ರಿ.ಶ ೧೪೫೩. ರಲ್ಲಿ ವ್ಯಾಪಾರಕ್ಕೆಂದು ಬೀದರಕ್ಕೆ ಬಂದು ನೆಲೆಸಿದಾತ ತನ್ನ ಸ್ವ ಸಾಮರ್ಥ್ಯ ಚತುರತೆ ನಿಷ್ಠೆಯಿಂದ ಬಹುಮನಿ ಅರಸರ ಸೇನೆಯನ್ನು ಸೇರಿದನು. ತನ್ನ ದೈಹಿಕ, ಮಾನಸಿಕ ಬಲದಿಂದ ಅಧಿಕಾರದಲ್ಲಿ ಉನ್ನತಿಯನ್ನು ಹೊಂದುತ್ತಾ ಕೊನೆಗೆ ಬರುಗಾಳಿಯ ಅಲೆಗಳಷ್ಟು ಪ್ರಬಲ ಹುದ್ದೆಯಾದ ಪ್ರಧಾನಮಂತ್ರಿಯ ಹುದ್ದೆ ಅಲಂಕರಿಸಿಕೊಂಡು, ಬಹುಮನಿ ರಾಜ್ಯದ ಕೇಂದ್ರವಾದ ಬೀದರ ಒಂದೆಂದೂ ಕಾಣದ ಸೈನಿಕ ಸಾಧನೆಗಳನ್ನು ಮಾಡಿ ಬೀದರಿನ ವ್ಯಾಪ್ತಿಗೆ ಕ್ರಿ.ಶ ೧೪೬೯ ರಲ್ಲಿ ಕೊಲ್ಹಾಪೂರದ ಸಮೀಪದಲ್ಲಿರುವ ಖಿಲ್ನಾ ಕೋಟೆಯನ್ನು ಗೋವೆಯು. ರಾಜಮಹೇಂದ್ರಿ ಕೊಂಡವೀಡು ಪ್ರದೇಶವನ್ನು ಸೇರಿಸಿಕೊಂಡನು. ಇತ್ತ ಕಡೆ ಸುಲ್ತಾನ ಮಹಮ್ಮದ ಷಾಹನು ವಿಜಯವಾಡದಿಂದ ಆರಂಭಿಸಿ, ವಿಜಯವಾಡದಿಂದ ಕಂಚಿಯವರೆಗೆ (ಬೀದರ) ಬಹುಮನಿ ಸಾಮ್ರಜ್ಯ ವಿಸ್ತರಿಸಿದ್ದರಿಂದ ಅರಬ್ಬೀಸಮುದ್ರದಿಂದ ಬಂಗಾಳ ಕೊಲ್ಲಿಯವರೆಗೆ ಬೀದರ ಹಬ್ಬಿದ್ದರಿಂದ ಆಡಳಿತದಲ್ಲಿ ಹಲವು ಬದಲಾವಣೆಗಳೊಂದಿಗೆ ದಕ್ಷತೆಯನ್ನು ಹೆಚ್ಚಿಸಲು ತನ್ನ ರಾಜ್ಯವನ್ನು ೮ ಪ್ರಾಂತಗಳಲ್ಲಿ ವಂಗಡಿಸಿದನು. ಈ ಆಡಳಿತವನ್ನು ನೋಡಿಕೊಳ್ಳಲು ಸಮರ್ಥ ನಿಷ್ಠೆ ಅಧಿಕಾರಿಗಳನ್ನು ನೇಮಿಸಿದನು. ಇವರು ದಂಗೆ ಏಳಬಾರದೆಂಬ ಉದ್ದೇಶದಿಂದ ವರ್ಗಾವಣೆ ಕ್ರಮ ಜಾರಿಗೆ ತಂದನು. ಈ ಅಧಿಕಾರಿಗಳಿಗೆ ತರಫ ಎಂದು ಕರೆಯುತ್ತಿದ್ದರು. ಗವಾನನ ಆಡಳಿತ ಅವಧಿಯಲ್ಲಿ ಬಹುಮನಿ ಸಾಮ್ರಾಜ್ಯದ ಕೀರ್ತಿ ಉತ್ತುಂಗ ಶಿಖರಕ್ಕೇರಿತು.

ರಾಜ್ಯ ವಿಸ್ತಾರದೊಂದಿಗೆ ಶೈಕ್ಷಣಿಕ ಅಭಿವೃದ್ಧಿಯನ್ನು ಬಲಪಡಿಸಿದನು. ಕ್ರಿ.ಶ ೧೪೭೨ ರಲ್ಲಿ "ಮದರಸಾ-ಎ-ಮಹಮದ್ ಗವಾನ ಎಂಬ ವಿಶ್ವವಿದ್ಯಾಲಯ ಸ್ಥಾಪಿಸಿದನು. ಇಂದಿಗೂ ಈ ಶಿಕ್ಷಣ ಮಂದಿರವು ಬೀದರ ನಗರದ ಮಧ್ಯದಲ್ಲಿ ನಿಂತು ಗವಾನನ ಶಿಕ್ಷಣಾಭಿಮಾನದ ಪ್ರತಿರೂಪವಾಗಿ ನಿಂತಿದೆ. ಈ ಆ ಕಾಲದಲ್ಲಿ ಈ ವಿಶ್ವವಿದ್ಯಾಲಯ ಬೃಹತ ಗ್ರಂಥಾಲಯ ಹೊಂದಿತ್ತು. ಆದರೆ ಪ್ರಸ್ತುತ ಇರುವ ಜಿಲ್ಲಾ ಗ್ರಂಥಾಲಯದಲ್ಲಿ ಉತ್ತಮವಾದ ಮತ್ತು ಜ್ಞಾನಪೀಠ ಪ್ರಶಸ್ತಿ ಪಡೆದ ಹಾಗೂ ಕೇಂದ್ರ ಮತ್ತು ರಾಜ್ಯ ಅಕಾಡೆಮಿ ಪ್ರಶಸ್ತಿ ಪಡೆದ ಕೃತಿಗಳು ದೊರೆಯದಿರುವುದು ನಮ್ಮ ದುರಂತ, ಆ ಕಾಲದಲ್ಲಿ ರಷ್ಯಾದ ಪ್ರವಾಸಿ ನಿಕಿಟಿನ ಬೀದರಕ್ಕೆ ಸಂದರ್ಶನ ನೀಡಿದ ಇಡೀ ಹಿಂದುಸ್ಥಾನದಲ್ಲಿ ಬೀದರ ಪ್ರಸಿದ್ಧ ನಗರವೆಂದು ವರ್ಣಿಸಿದ.

ಕ್ರಿ.ಶ.೧೪೮೧ ರಲ್ಲಿ ಗವಾನನು ಒಳ ಶತ್ರುಗಳ ಕುಹಕಕ್ಕೆ ಒಳಗಾಗಿ ದೇಹ ತ್ಯಜಿಸಿದ ನಂತರ ಮೂರನೇಯ ಮಹಮ್ಮದ ಶಹನು ತನ್ನ ಅಪಕ್ವ ಬುದ್ದಿ ಮತ್ತೆಯಿಂದ ಗವಾನನಿಗೆ ಮರಣದಂಡನೆ ಕೊಟ್ಟಿದ್ದು ತಪ್ಪೆಂದು ಅರೀವಾದ ಮೇಲೆ ಚಿಂತಿಸಿ ಚಿತೆಯೇರಿದ ಕ್ರಿ.ಶ ೧೪೮೨ ರಲ್ಲಿ ನಂತರ ಅಳಿವಿನ ಅಂಚಿನತ್ತ ಬಹುಮನಿ ರಾಜ್ಯ ಕಾಲಿಟ್ಟಿತ್ತು.

## ಮೊಗಲ ಸಾಮ್ರಾಜ್ಯ:

೧೬೫೬ ರಲ್ಲಿ ಬೀದರನ್ನು ಔರಂಗಜೇಬ ಗೆದ್ದುಕೊಂಡನು. ಮಹಮ್ಮದಾಬಾದ ಬೀದರಿನ ಹೆಸರು ಜಾಫರಬಾದ ಬೀದರ ಎಂದು ನಾಮಕರಣ ಮಾಡಿದನು. ಹಾಗೂ ಬೀದರನ್ನು ದೆಹಲಿ ಚಕ್ರವರ್ತಿಯಿಂದ ನೇಮಿಸಲ್ಪಟ್ಟ ರಾಜ್ಯಪಾಲನು ಆಡಳಿತ ನೋಡಿಕೊಳ್ಳುತಿದ್ದನು. ಇವನು ಮೋತಿ ಮಜ್ಜಿದ ಕಟ್ಟಿಸಿದ್ದನ್ನು ಬಿಟ್ಟರೆ ಹೊರತು ಪಡಿಸಿದರೆ ಬೇರಾವುದೇ ಪುರಾವೆಗಳಿಲ್ಲ.

## ನಿಜಾಮ ಆಳ್ವಿಕೆ:

ಕ್ರಿ.ಶ ೧೭೭೪ ರಲ್ಲಿ ನಿಜಾಮ ಉಲ್ ಮುಲ್ಕನು ಮೊಗಲರಿಂದ ದಖ್ಖನಿನ ಸುಭೇದಾರಿಯನ್ನು ಗಳಿಸಿಕೊಂಡು ಹೈದರಾಬಾದನಿಂದ ಆಳಲಾರಂಭಿಸಿದ ಆಸಾಪ್ ಜಾಹಿ ಆಗೆ ಬೀದರ ಪ್ರಾಂತೀಯ ರಾಜಧಾನಿಯಾಗಿ ಮಂದುವರೆದಿತ್ತು. ಸದರಿ ಕಾಲ ಮರಾಠರೊಂದಿಗೆ ಸೆಣಸಾಟ ಆಂತರಿಕ ದಂಗೆಗಳ ಕಾಲವಾಗಿ ಬಹುಮನಿ ಸಾಮ್ರಾಜ್ಯ ಕಾಲಚಕ್ರದಡಿಯಲ್ಲಿ ಗತ ವೈಭವದಿ ಮೆರೆದು ನಮಗಿಂದು ಮರೀಚಿಕೆಯಾಗಿ ಪರಿಣಮಿಸಿದೆ ಬೀದರ. ಈ ಸಾಮ್ರಾಜ್ಯದ ಭವ್ಯವಾದ ಕೋಟೆಯನ್ನು ೧೪೨೬ರಲ್ಲಿ ಅಹಮದಷಾ ಕಟ್ಟಿಸಿದ ೪ ಕಿ.ಮಿ. ಸುತ್ತಳತೆಯದಾಗಿದ್ದು ೮ ಪ್ರಮುಖ ದ್ವಾರಗಳು ಇವೆ. ಬಹುಮನಿ ಮನೆತನದ ಹದಿನಾಲ್ಕು ರಾಜರುಗಳಿಗಿಂತಲೂ ದಕ್ಷ ಪ್ರಧಾನಿಯಾದ ಮಹಮದ್ ಗವಾನನ ಕಾಲವೇ ಸುವರ್ಣಕಾಲವಾಗಿತ್ತು. ಇವನ ನಂತರ ಬಹುಮನಿ ಮನೆತನ ಅವನತಿಯತ್ತ ಸಾಗಿತ್ತು.

## ಮಹಮ್ಮದ ಶಹ: (೧೪೨೨-೩೬)

ಇವನು ಕಾಲದಲ್ಲಿ ಬೀದರಕ್ಕೆ ಮರು ಜೀವ ಕೊಟ್ಟ ಬಹುಮನಿ ಮನೆತನದ ದೊರೆ. ಇವನ ಕಾಲದಲ್ಲೆ ೧೪೨೪ ರಲ್ಲಿ ಗುಲಬರ್ಗಾ ದಿಂದ ಬೀದರಕ್ಕೆ ಸ್ಥಳಾಂತರಗೊಂಡಿದ್ದರಿಂದ ಇಂದು ಬೀದರ ವಿಶ್ವ ವಿಖ್ಯಾತ ಹೊಂದಿ ಅನೇಕ ಸಾಧನೆಗಳ ಸರಮಾಲೆ ತನ್ನ ಕೊರಳಿಗೆ ಹಾಕಿಕೊಂಡಿದೆ. ಮಹಮ್ಮದ ಶಹ ಬೀದರಕ್ಕೆ ಕಾಲು ಇಡುತ್ತಿದ್ದಂತೆ ಮಸೀದಿ, ಅರಮನೆ ಮತ್ತು ಇತರ ಕಟ್ಟಡಗಳನ್ನು ಕಟ್ಟಿಸಿ ರಾಜಧಾನಿ ಕೇಂದ್ರದ ವೈಭವ ಹೆಚ್ಚಿಸಿದನು.

**ಅಲ್ಲಾಉದ್ದೀನ ದೊರೆ:**

ಇವನ ಕಾಲ ೧೪೩೬ ರಿಂದ ಇವರ ಕಾಲದಲ್ಲಿ ಪ್ರಗತಿ ಸಾಧಿಸದಿದ್ದರೂ ತನ್ನ ತಂದೆಯ ನೆನಪಿಗಾಗಿ (ಸಮಾಧಿ) ಬೀದರ ಬಳಿ ಇರುವ ಅಷ್ಟುರನಲ್ಲಿ ಗುಮ್ಮಟಗಳನ್ನು ಕಟ್ಟಿಸಿದನು. ಇದು ಹಿಂದು-ಮುಸ್ಲಿಂರ ಪೂಜಾ ಕೇಂದ್ರವಾದದ್ದು ಅತೀ ಮಹತ್ವದ ಸಂಗತಿ, ಹಾಗೂ ಇಂದಿಗೂ ಬೀದರ ನಗರ ನಿರ್ಮಾಪಕನಿಗೆ ಬೀದರನ ವಾಸಿಗಳು ಜಾತಿ ಭೇದವೆನ್ನದೆ ಸಲ್ಲಿಸುವ ಮನಪೂರ್ವಕ ಗೌರವವಂದನೆ ಇಡೀ ರಾಷ್ಟ್ರಕ್ಕೆ ಜಗತ್ತಿಗು ಇದರಿಂದ ಭಾವೈಕ್ಯತೆಯ ಸಂದೇಶ, ಬೀದರ ಈ ರೂಪದಲ್ಲಿ ಕೊಡುತ್ತಿರುವುದು ವಿದ್ವಾಂಸರು ಗಮನ ಹರಿಸಬೇಕಾಗಿದೆ.

**ಹುಮಾಯನ ಷಾಹ:**

ಅಲ್ಲಾವುದ್ದೀನನ ಮಗನಾಗಿದ್ದರಿಂದ ಅಧಿಕಾರದ ಪಟ್ಟ ಕೊರಳಿಗೆ ಬಿತ್ತು. ಆದರೆ ಇವರಿಂದ ಅರಸು ಮನೆತನಕ್ಕಾಗಲೀ ಬೀದರಕ್ಕಾಗಲೀ ಯಾವ ರೀತಿಯೂ ಒಳಿತಾಗಲಿಲ್ಲ ವಿನಹ ಅವನ ಬೆಳೆಯುತ್ತಿದ್ದಂತೆ ಹೈದರಾಬಾದನಲ್ಲಿ ಪ್ರೆಂಚರು ಬ್ರಿಟಿಷ ಪ್ರಭಾವ ಬೆಳೆಯಿತು. ಅದರ ಕರಿನೆರಳು ಬೀದರ ಮೇಲೂ ಬಿತ್ತು. ಅಫಘಾನರು ರೋಹಿಲರು ಕೊನೆಯಲ್ಲಿ ಸಿಖ್ಬರನ್ನು ಆಡಳಿತದಲ್ಲಿ ನೇಮಿಸಕೊಳ್ಳಲಾಯಿತು. ಕ್ರಿ.ಶ. ೧೮೪೬ರಲ್ಲಿ ಮಿಲಿಟರಿ ಅಧಿಕಾರಿಗಳ ಆಡಳಿತದ ಬದಲಾಗಿ ನಿಜಾಮ ರಾಜ್ಯವನ್ನು ಜಿಲ್ಲೆಗಳಾಗಿ ವಿಂಗಡಿಸಲಾಯಿತು. ರಾಜಧಾನಿಯಿಂದ ಪ್ರಾಂತೀಯ ರಾಜಧಾನಿಗೆ ಇಳಿದಿದ್ದ ಬೀದರ ವಿಭಾಗ ಕೇಂದ್ರವಾಯಿತು. ೧೯೦೫ರಲ್ಲಿ ಬೀದರ ಜಿಲ್ಲಾ ಕೇಂದ್ರವನ್ನಾಗಿಸಲಾಯಿತು. ೯ ತಾಲ್ಲೂಕು ಇದರ ಅಧೀನಕ್ಕೆ ಒಳಪಟ್ಟಿದ್ದವು. ಈ ಅವಧಿಯಲ್ಲಿ ಬೀದರ ಅಭಿವೃದ್ಧಿಯ ಪಥದತ್ತ ಹೆಜ್ಜೆ ಇಟ್ಟು ಆಧುನಿಕ ಸೌಲಭ್ಯಗಳ ಸೌಕರ್ಯಗಳು ಒದಗಿಸಲಾರಂಭಿಸಿದವು.

೧೯೪೭ ಅಗಸ್ಟ ೧೫ರಂದು ಭಾರತ ಬ್ರಿಟಿಷರಿಂದ ಸ್ವಾತಂತ್ರ್ಯಗೊಂಡರು ಬೀದರ ನಿಜಾಮನ ಕಪಿಮುಷ್ಟಿಯಲ್ಲಿ ಬಂಧಿತವಾಗಿದ್ದ ಪರಿಣಾಮ ರಜಾಕಾರ ಹಾವಳಿಯು ವಿಪರೀತ ಮಟ್ಟಕ್ಕೇರಿ ಜಿಲ್ಲೆಯ ಜನತೆ ತತ್ತರಿಸಿದರು, ಮನೆ ಸಂಪತ್ತು ಕಳೆದುಕೊಂಡರು. ರಜಾಕಾರ ದೌರ್ಜನ್ಯ ಮುಗ್ಧ ಮಹಿಳೆ ಮಕ್ಕಳ ಮೇಲೆ ಅತ್ಯಾಚಾರ ಅಟ್ಟಹಾಸ ಮರೆಯುತ್ತಿತ್ತು. ಜನರ ಹಾಹಾಕಾರ ಗಗನ ಸೀಳುವಂತಾದಾಗ ದಿಲ್ಲಿಯ ದೊರೆಗಳ ಕಣ್ಣತೆರೆದವು ದೇಶದ ಉಕ್ಕಿನ ಮನುಷ್ಯನೆಂದು ಖ್ಯಾತಿ ಪಡೆದ ಸರದಾರ ವಲ್ಲಭಾಯಿ ಪಟೇಲ ಸೈನಿಕರೊಂದಿಗೆ ಆಗಮಿಸಿ ನಿಜಾಮನ ಕಪಿಮುಷ್ಠಿಯಿಂದ ಹೈದರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನಗೊಂಡಿತು. ಕರ್ನಾಟಕದ ಮಡಿಲಲ್ಲಿ ೧೯೫೬ರಲ್ಲಿ ಜರುಗಿದ ರಾಜ್ಯದ ಮರು ವಿಂಗಡನೆಯಲ್ಲಿ ಬೀದರ, ಔರಾದ, ಭಾಲ್ಕಿ, ಹುಮನಾಬಾದದೊಂದಿಗೆ ಬೀದರ ಜಿಲ್ಲೆ ಮೈಸೂರು ರಾಜ್ಯದ ಅಂಗವಾಗಿ ಕರ್ನಾಟಕದ ಕೀರಿಟವಾಯಿತು. ಇದು ಜಿಲ್ಲೆ ನಡೆದು ಬಂದ ದಾರಿ.

**ನಗರ ರಚನೆ:**

ಬೀದರ ನಗರ ರಚನೆಯ ಖಚಿತವಾದ ಆಧಾರವಿಲ್ಲದಿದ್ದರು ಆದಿ ಅನಾದಿ ಕಾಲದಿಂದಲೂ ಇಲ್ಲಿ ಜನವಾಸವಿತ್ತು ಎಂದು ಅನೇಕ ಜನಪದ, ದಂತ ಕತೆ, ಪೌರಾಣಿಕಗಳಿಂದ ಉಹಿಸಬಹುದಾದರು ಆ ಕುರಿತು ಹಾಗೂ ಬೀದರ ಇತಿಹಾಸದ ಗರ್ಭದಲ್ಲಿ ಅನೇಕ ರಹಸ್ಯಗಳು ಅಡಗಿರುವುದರಿಂದ ಅದರ ನೈಜ ರೂಪ ನಾಳೆಯ ಪ್ರಜೆಗಳಿಗೆ ವಸ್ತು ಸ್ಥಿತಿಯ ನಿಷ್ಟೆಯ ಮೂಲ ಗೊತ್ತಾಗುವಂತಾಗಬೇಕು. ಅದರ ರೂಪ ಯಥಾವತ್ತಾಗಿ ತಿಳಿಯಲು ಸಂಶೋಧನೆಯ ಅಗತ್ಯ ಇದೆ.

ಅಣದೂರ ಗ್ರಾಮದ ಶಿಲಾಲೇಖದಲ್ಲಿ ಅಟ್ಟಾಳೆ ನಾಡಿನ ಉಲ್ಲೇಖವಿದೆ. ಆದರಿಂದ ಕ್ರಿ.ಶ ೧೧೦೦ ರಲ್ಲಿಯ ರಾಜಮನೆತನವಿದ್ದದ್ದು ಅಲ್ಲಗಳೆಯುವಂತಿಲ್ಲ. ಆದರೂ ಸಹ ಈ ಬೀದರ ನಗರ ಕಾಕತಿಯರ ಕಾಲದಲ್ಲಿ ನಿರ್ಮಾಣಗೊಂಡ ಕೆಲವು ಉಲ್ಲೇಖಗಳು ದೊರೆಯುತ್ತವೆ. ಆದ್ದರಿಂದ ಬೀದರ ನಗರವನ್ನು ಕಾಕತೀಯರ ಕಾಲದಲ್ಲಿ ಸಹ ಕಾಕತಿಯರಿಂದಲೇ ಅಧಿಕೃತವಾಗಿ ನಗರ ಪ್ರಮುಖ ಗೋಪುರವಾದ ಚೌಬಾರ ಕಟ್ಟಲ್ಪಟ್ಟಿತೆಂದು ದಾಖಲೆಗಳಿರುವುದರಿಂದ ಅವರ ಕಾಲದಲ್ಲಿ ಬೀದರ ಅಭಿವೃದ್ಧಿಹೊಂದಿರಬಹುದು ಎಂಬುದಕ್ಕೆ ಕಾರಣ ಮಹಾಭಾರತದಲ್ಲಿ ವಿದುರ ನಗರ ನಳ ದಮಯಂತಿಯರು ಕಾಲದಲ್ಲಿ ರಮ್ಯ ನಗರ ನಂತರ ಬೀದರಾದ ಬಗ್ಗೆ ಉಲ್ಲೇಖವಿದೆ.

ಬೀದರ ಈಗ ನಗರ ಸಭೆಹೊಂದಿ ಜಿಲ್ಲಾ ಕೇಂದ್ರಾವಾಗಿದೆ. ಇದು ಕರ್ನಾಟಕ ರಾಜಧಾನಿ ಬೆಂಗಳೂರಿನಿಂದ ೭೧೨ ಕಿ.ಮಿ. ದೂರದಲ್ಲಿದೆ. ತಾಲೂಕಿನಲ್ಲಿ ರಾಷ್ಟ್ರೀಯ ಹೆದ್ದಾರಿ ಹೋಗುತ್ತದೆ. ಬೀದರ ನಗರದಲ್ಲಿಂದು ೧೩೨೪೦೮ ಜನ ವಾಸಿಸಿದ್ದರೆ, ಗ್ರಾಮೀಣ ಭಾಗದಲ್ಲಿ ೯೯೬೦೪೪ ಜನ ಸಂಖ್ಯೆ ವಾಸಿಸುತ್ತಾರೆ. ೯೯೯೧ ಜನಗಣತಿಯ ಪ್ರಕಾರ ಜಿಲ್ಲಾ ಕಚೇರಿಗಳು ಮತು ತಾಲೂಕ ಮಟ್ಟದ ಕಚೇರಿಗಳು ನಗರ ಸಭೆ ಹೊಂದಿದ್ದು ಹಲವಾರು ಶೈಕ್ಷಣಿಕ ಸಂಸ್ಥೆಗಳಿವೆ. ನಗರದಲ್ಲಿ ೬೬ ಮಸೀದಿಗಳಿವೆ. ೧ರಲ್ಲಿ ಸಮಾಜ ಆಗುವುದಿಲ್ಲ. ೮-೧೦ ದರ್ಗಾಗಳು ೫-೬ ಚರ್ಚುಗಳು, ೨ ಬೌದ್ದ ವಿಹಾರ, ೧ ನಾನಕ ಝುರಾ ಮತ್ತು ೫೦-೬೦ ದೇವಸ್ಥಾನಗಳಿದ್ದರೆ ಐತಿಹಾಸಿಕ ಪ್ರಮುಖ ೮-೧೦ ದೇವಸ್ಥಾನಗಳು ಬೀದರ ನಾಗರದ ಅಷ್ಠದಿಕ್ಕಿನಲ್ಲಿವೆ, ಹಾಗೂ ಬೀದರ ಪ್ರಮುಖ ವೃತ್ತಗಳಲ್ಲಿ ಬಸವೇಶ್ವರ ಅಂಬೇಡ್ಕರ, ಶಿವಾಜಿ, ಮಡಿವಾಳರ ಕಂಚಿನ ಮೂರ್ತಿಗಳು ನಗರದ ಸೌಂದರ್ಯಕ್ಕೆ ಮೆರಗು ತಂದಿವೆ.

**ಕರಕುಶಲ ಕಲೆಗಳು:**

ಕಲೆಗಳ ತವರೂರಾದ ಬೀದರ ಕರಕುಶಲ ಕಲೆಗಳಲ್ಲು ಸಹ ವಿಶ್ವ ವಿಖ್ಯಾತಿಯನ್ನು ಪಡೆದಿದೆ. ಕರಕುಶಲ ಕಲೆಯ ಗುಂಪಿಗೆ ಸೇರಿರುವ ಬಿದರ ಕಲೆ ಪ್ರಪಂಚದ ೫೫ ದೇಶಗಳಿಗೆ ರಪ್ತಾಗುವ ಈ ಕಲೆ ಬೀದರಲ್ಲದೆ ಮತ್ತೆಲ್ಲೂ ತಯಾರಾಗುವುದಿಲ್ಲ. ಬೀದರಿನ ಕೋಟೆಯೊಳಗೆ ದೊರೆಯುವ ಮಣ್ಣಿನ ಸತ್ವವೇ ಈ ಬೀದರ ಕಲೆಯ ಮೂಲ. ಈ ಕಲೆ ಬಹುಮನಿ ಅರಸರಕಾಲದಲ್ಲಿ ಗವಾನ ಆಡಳಿತವಿದ್ದಾಗ ಆರಂಭಗೊಂಡಿದೆ. ಅಂದಿನಿಂದ ಇಂದಿನವರೆಗೂ ಈ ಕಲೆಯನ್ನು ಉಳಿಸಿಕೊಂಡು ಜೀವನೋಪಾಯವಾಗಿಸಿಕೊಂಡು ಬಂದಿದ್ದಾರೆ. ಈ ಕಲೆಯ ಬೆಲೆ ತಂದಿತ್ತವರಿಗೆ ಇಲ್ಲಿನ ಜನರು ಗೌರವ ಸೂಚಿಲೇಬೇಕು. ಇಂದು ಬೀದರ ಆ ಕಲೆಯ ಪ್ರತಿಕವಾಗಿದೆ. ಬೀದರಿನ ಕಲಾವಿದರು ಬುಡ್ಡರು, ಕಮ್ಮಾರರು, ಬಡಿಗರು, ಅಕ್ಕಸಾಲಿಗರು, ನೇಕಾರರು ಬೀದರ ತಾಲ್ಲೂಕಿನ ಕರಕುಳಗಿದೆ. ಕಲೆಗಳಿಗೆ ಜೀವ ತುಂಬಿ ಮನ್ನಡೆಸುತ್ತಿದ್ದಾರೆ.

**ಸಂಗೀತ:**

ಭಾರತೀಯ, ಸಂಗೀತದ ಇತಿಹಾಸದ ಪುಟಗಳಲ್ಲಿ ಬೀದರ ಜಿಲ್ಲೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಅದರಲ್ಲೂ ಬೀದರ ತಾಲ್ಲೂಕಿನಲ್ಲು ಸ್ವಲ್ಪ ಮಟ್ಟಿನ ಪಾಲು ಇವೆ. ಬಹುಮನಿ ಸಾಮ್ರಾಜ್ಯದ ಕೊನೆಯ ಅರಸನಾದ ಕಲೀ ಮುಲ್ಲಾನ ಕಾಲದಲ್ಲಿ ಬೀದರ ಪಟ್ಟಣದಲ್ಲಿ ಅನಂತ ಸಂಭಾಜಿ ಎಂಬವರು ಪ್ರಸಿದ್ಧ ಸಂಗೀತಗಾರನಾಗಿದ್ದನೆಂದು ಹೇಳಲಾಗುತ್ತದೆ.

ಬೀದರ ಶಾಹಗಂಜದಲ್ಲಿ ಬಸವೇಶ್ವರ ಮಂದಿರದ ಸಂಗೀತದ ದರ್ಬಾರ, ಬೀದರನ ಪಾಪನಾಶ ದೇವಾಲಯ ಸಂಗೀತ ಮಹೋತ್ಸವ ತಾಡ್ಲಾಪುರದ ದತ್ತ ನಂದಿ ಮಠ ಸಂಗೀತ ಚತುದರ್ಶಿಗಳು ಬೀದರ ಸಂಗೀತಕ್ಕೆ ವಿಶಿಷ್ಠ ಮರಗನ್ನು ಉನ್ನತ ಸ್ಥಾನವನ್ನು ಕಲ್ಪಿಸಿವೆ. ಭಾರತೀಯ ಸಂಗೀತ ಕಲೆ ಉಳಿದು ಬೆಳೆಯಲಿ ಎಂಬ ಸದುದ್ದೇಶದಿಂದ ಸಂಗೀತ ಕಲಾಮಂದಿರ ನಿರಂತರ ಕಾರ್ಯ, ಕಾಶಿನಾಥ ಪಂಚಶೀಲ ಗವಾಯಿ ಹಾಗೂ ಅನೇಕ ಯುವಕರು ಸಹ ಈ ಕ್ಷೇತ್ರದಲ್ಲಿ ಹೆಸರು ಮಾಡಿದವರಾಗಿದ್ದಾರೆ. ಹಾರ್ಮೋನಿಯಂನಲ್ಲಿ ರಾಜೇಂದ್ರಸಿಂಗ ಪವಾರ, ಶ್ರೀ ಶಂಬುಲಿಂಗ ವಾಲದೊಡ್ಡಿ ಗಾಯನದಲ್ಲಿ ತಮ್ಮ ಛಾಪು ಮೂಡಿಸಿ ಬೀದರಿಗೆ ಕೀರ್ತಿ ತಂದಿದವರಾಗಿದ್ದಾರೆ.

**ಒಕ್ಕಲುತನ (ಕೃಷಿ):**

ದೇಶ ಕೃಷಿ ಪ್ರಧಾನವಾಗಿದಂತೆ ಬೀದರ ತಾಲ್ಲೂಕ ಸಹ ಸಂಪೂರ್ಣವಾಗಿ ಕೃಷಿ ಮೇಲೆ ಅವಲಂಬಿತವಾಗಿದೆ. ತಾಲ್ಲೂಕು ಅರೆಮಲೆನಾಡು ವಲಯದಲ್ಲಿ ಇರುವದರಿಂದ ಮುಖ್ಯವಾಗಿ ಎರಡು ಹಂಗಾಮು ಅಂದರೆ ಮುಂಗಾರು (ಖರೀಫ) ಹಾಗೂ (ರಾಬಿ) ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ. ಅಲ್ಲದೇ ಮಣ್ಣಿನಲ್ಲಿ ಖರೀಫ ಮಾತ್ರ ಬೆಳೆದರೆ ಆಳವಾದ ಕಪ್ಪು ಮಣ್ಣಿನಲ್ಲಿ ಎರಡು ಹಂಗಾಮಿನಲ್ಲಿ ಬೆಳೆಗಳು ಬೆಳೆಯಲಾಗುತ್ತದೆ. ಒಟ್ಟು ೯೨೨೦೩ ಹೆಕ್ಟರ ಬೌಗೋಳಿಕ ವಿಸ್ತೀರ್ಣದಲ್ಲಿ ೬೩೪೩೦ ಹೆಕ್ಟರ ಪ್ರದೇಶದಲ್ಲಿ ಬಿತ್ತನೆಯಾಗಿದೆ. (೨೦೦೦-೨೦೦೧) ೨೫೨೫ ಹೆಕ್ಟರ. ಬಂಜಾರ ಭೂಮಿ ಅಂದರೆ ವ್ಯವಸಾಯ ಮಾಡಲು ಯೋಗ್ಯವಲ್ಲದ ಪ್ರದೇಶವಾಗಿದೆ. ೯೧೦ ಹೆಕ್ಟರ ಪ್ರದೇಶದಲ್ಲಿ ಗೋಮಾಳವಿರುವ ತಾಲೂಕಿನ ಭೂಮಿಯಲ್ಲಿ ೮೪೨೮ ಹೆಕ್ಟರ ಭೂಮಿಯಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಬೆಳೆ ಬೆಳೆಯಲಾಗುತ್ತದೆ. ನೀರಾವರಿ ಪ್ರದೇಶ ೧೩೩೮೪ ಇದ್ದು ಕಾರಂಜಿ ಕಾಲುವೆಯ ಲಾಭ ಈ ತಾಲೂಕಿನಲ್ಲಿ ಆದರೂ ಸಹ ಕೆರೆಗಳಿಂದ ೩೪೦ ಹೆಕ್ಟರ ಭಾವಿಗಳಿಂದ೬೫೫೦ ಹೆಕ್ಟರ ಕೊಳವೆ ಬಾವಿಗಳಿಂದ ೫೯೧೧ ಹೆಕ್ಟರ ಹಾಗೂ ಇತರ ಮೂಲಗಳಿಂದ ೫೮೩ ಹೆಕ್ಟರ ಭೂಮಿಯಲ್ಲಿ ಹೆಚ್ಚಿನ ಭಾಗ ಕಬ್ಬು ಪ್ರಧಾನ ಬೆಳೆಯಾಗಿದೆ. ತರಕಾರಿ ಕಳವಿ(ಭತ್ತ)ಗಳು ಬೆಳೆಯುತ್ತಾರೆ. ಒಕ್ಕಲಿಗರು ಮಳೆಗೆ ಅವಲಂಬಿತವಾದವರು, ಏಕದಳ, ದ್ವಿದಳ ಬೇಳೆಗಳು ಬೆಳೆಯುತ್ತಾರೆ.

**ಶಿಕ್ಷಣ:**

ಈ ತಾಲ್ಲೂಕು ಕ್ರಿ.ಶ ೧೪೭೨ ರಲ್ಲಂತು ಇಡೀ ವಿಶ್ವದ ಗಮನ ತನ್ನತ್ತ ಸೆಳೆದುಕೊಂಡಿತ್ತು. ಬೀದರಿನ ಗವಾನ ಮದರಸಾ ಪ್ರಮುಖ ವಿದ್ಯಾ ಕೇಂದ್ರವಾಗಿತ್ತು. ವಿಶ್ವ ವಿದ್ಯಾಲಯಗಳಲ್ಲಿ ಅಂದಿನ ಪ್ರಾಧ್ಯಾಪಕರು ಅದಕ್ಕಾಗಿ ಇರಾನ, ಇರಾಕ, ಪಾರ್ಸಿ, ಈಜಿಪ್ತ ಹೀಗೆ ಹಲವಾರು ದೇಶಗಳಿಂದ ಇಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದರು. ಆದರೆ ಕಾಲ ಚಕ್ರದಡಿಯಲ್ಲಿ ಆ ವ್ಯವಸ್ಥೆ ಮಂಜಿನಂತೆ ಅಳಿದು ಹೋಯಿತು. ಅದಾದ ನಂತರ ಬ್ರಿಟಿಷರ ಕಾಲದಲ್ಲಿ ಕೆಲವು ಶಿಕ್ಷಣ ಸಂಸ್ಥೆಗಳು ತಲೆ ಎತ್ತಿ ನಿಂತವು ಕೆಲವು ಇನ್ನೂ ಕಾರ್ಯನಿರತವಾಗಿವೆ. ಆದ್ದರಿಂದ ಇಲ್ಲಿನ ಸಾಕ್ಷರತಾ ಪ್ರಮಾಣ ೫೦.೯೬೭ ಆಗಿರುತ್ತದೆ.

ಪ್ರಸ್ತುತ ಈ ತಾಲ್ಲೂಕಿನಲ್ಲಿ ೧೦೪ ಕಿರಿಯ ಪ್ರಾಥಮಿಕ ಶಾಲೆಗಳಿದ್ದರೆ ಹಿರಿಯ ಪ್ರಾಥಮಿಕ ಶಾಲೆಗಳಿದ್ದರೆ, ಹಿರಿಯ ಪ್ರಾಥಮಿಕ ಶಾಲೆ ೧೮೨ಇವೆ. ಪ್ರೌಢಶಾಲೆಗಳು ೭೬ ಪದವಿ ಪೂರ್ವ ಕಾಲೇಜುಗಳು ಸರ್ಕಾರಿ-೧೩ ಸಾಮಾನ್ಯ ಪದವಿ ಶಿಕ್ಷಣದ ೧೫ ಕಾಲೇಜುಗಳಿವೆ. ಶಿಕ್ಷಣದ ಪದವಿ ಕಾಲೇಜುಗಳು -೧, ಆಯುರ್ವೇಧ-೧, ಕಾನೂನು ಮಹಾವಿದ್ಯಾಲಯ-೧,

ಟಿ.ಸಿ.ಎಚ್. ಕಾಲೇಜು–೧೫, ಡಿ.ಪಾರ್ಮಸಿ–೨, ಬಿ.ಪಾರ್ಮಸಿ – ೧, ಡೆಂಟಲ ಕಾಲೇಜು – ೧, ನರಸಿಂಗ ಕಾಲೇಜು –೫, ವೆಟರನರಿ ಕಾಲೇಜು –೧, ಸಿ ಪಿ ಎಡ್ –೨, ಪಿ.ಜಿ (ಸ್ನಾತಕೋತ್ತರ ಅಧ್ಯಯನ ಕೇಂದ್ರ) –೧, ಹೀಗೆ ವಿವಿಧ ವಿಷಯಗಳ ಮೇಲೆ ಶಿಕ್ಷಣ ಪಡೆಯುತ್ತಿದ್ದಾರೆ. ಆದ್ದರಿಂದ ಮೆಟ್ರಿಕ ಪೂರ್ವ–೭, ಮೆಟ್ರಿಕ ನಂತರದ–೦೪, ಅನುದಾನ ಪಡೆಯುತ್ತಿರುವ ಮೆಟ್ರಿಕ ಪೂರ್ವ –೨, ಎಸ್.ಸಿ.ಕೆ.ಎಸ್.ಟಿ. ವಿದ್ಯಾರ್ಥಿನಿಲಯಗಳಿದ್ದರೆ. ಓ.ಬಿ.ಸಿ. ವಿದ್ಯಾರ್ಥಿನಿಲಯಗಳು ಮೆಟ್ರಿಕ ಪೂರ್ವ – ೦೪ ಹಾಗೂ ಪಾಲಿಟೆಕ್ನಿಕ –೧, ವಸತಿ ನಿಲಯಗಳು ಕಾರ್ಯನಿರ್ವಹಿಸುತ್ತವೆ. ಈ ತಾಲ್ಲೂಕಿನಲ್ಲಿ ಎಮ್.ಬಿ.ಬಿ.ಎಸ್. – ೧ ಇದೆ.

**ಸಾರಿಗೆ ಸಂಪರ್ಕ:**

ಈ ತಾಲ್ಲೂಕಿನಲ್ಲಿ ೫೯೭ ಕಿ.ಮಿ ಉದ್ದದ ಬ್ರಿಟಿಷರ ಕಾಲದಲಿ ನಿರ್ಮಿಸಿದ ರೈಲು ಮಾರ್ಗ ಬ್ರಾಡ್‌ಗೇಜ ಹೊಂದಿದ್ದು, ಲೋಕೋಪಯೋಗಿ ಇಲಾಖೆಯ ३ ಭಾರಿ ಸೇತುವೆಗಳು ಇವೆ. ಪೂರ್ವದಲ್ಲಿ ಆಂಧ್ರ ಪ್ರದೇಶದ ರಾಜಧಾನಿ ಹೈದ್ರಾಬಾದಿಗೆ ಹಾಗೂ ದಕ್ಷಿಣಕ್ಕೆ ಹುಮನಾಬಾದ ಮುಖಾಂತರ ಗುಲಬರ್ಗಾ ಮತ್ತು ಬೇರೆ ಜಿಲ್ಲೆಗಳಿಗೆ ಹಲವಾರು ಬಸ್ಸುಗಳು ಹೋಗುತ್ತವೆ. ಹಾಗೂ ಪಶ್ಚಿಮ ಮತ್ತು ಉತ್ತರಕ್ಕೆ ಮಹಾರಾಷ್ಟ್ರದ ಸೋಲಾಪುರ, ಲಾತೂರ, ನಾಂದೇಡಗೆ ಹೋಗಲು ರಸ್ತೆಗಳಿವೆ. ಹೊರ ರಾಜ್ಯಕ್ಕೆ ೧೨ ಬಸ್ಸುಗಳು ಇಲ್ಲಿಂದ ಸಂಚರಿಸುತ್ತವೆ. ತಾಲ್ಲೂಕಿ ಸಿಂದೋಲ ಗ್ರಾಮದಿಂದ ರಾಷ್ಟ್ರಿಯ ಹೆದ್ದಾರಿ ೯ ಹಾದು ಹೋಗುತ್ತದೆ. ರಾಜ್ಯ ಹೆದ್ದಾರಿ ೯೨ ಕಿ.ಮಿ ಜಿಲ್ಲೆಯ ಮುಖ್ಯ ರಸ್ತೆಗಳು ೧೫೬ ಕಿ.ಮಿ. ಮತ್ತು ಇತರ ಜಿಲ್ಲಾರಸ್ತೆಗಳು – ೬ ಹಳ್ಳಿಗಳು ೧೪೮ ಟಿ.ಡಿ.ಬಿ ರಸ್ತೆಗಳು ೨೧೨ ಕಿ.ಮಿ ಇರುವ ರಸ್ತೆಗಳಿವೆ.

ತಾಲ್ಲೂಕಿನ ಕೊನೇಯ ಹಳ್ಳಿಯವರೆಗೂ ಬಸ್ಸುಗಳ ಸೌಕರ್ಯ ಕಲ್ಪಿಸಲಾಗಿದೆ. ವಿಶಾಲವಾದ ಅಧುನಿಕರಣಗೊಂಡ ಬಸ್ ನಿಲ್ದಾಣವನ್ನು ನಿರ್ಮಿಸಲಾಗಿದೆ. ತಾಲೂಕಿನಲ್ಲಿ ೫೮ ಅಂಚೆ ಕಛೇರಿಗಳಿವೆ. ತಂತಿ ಸೌಲಭ್ಯ ಕಛೇರಿ –೧ ಹಾಗೂ ದೂರವಾಣಿ ವಿನಿಮಯ ಕೇಂದ್ರಗಳು –೨೦, ೨೦೦೦–೦೧ ರಂತೆ ಬೀದರನಲ್ಲಿ ೨೧ ಕಿ.ಮೀ. ನಲ್ಲಿ ೨ ರೈಲ್ವೆ ನಿಲ್ದಾಣಗಳು ಒಂದು ನಗರ ಪ್ರದೇಶದಲ್ಲಿದ್ದರೆ ಇನ್ನೊಂದು ಗ್ರಾಮೀಣದಲ್ಲಿದೆ. ಇಲ್ಲಿನ ರೈಲು ಮಾರ್ಗ ಹೈದರಾಬಾದನಿಂದ ಆರಂಭವಾಗಿದೆ. ಈಗ ಈ ರಸ್ತೆಯ ಮೇಲಿಂದ ರಾಜ್ಯದ ರಾಜದಾನಿ ಬೆಂಗಳೂರು ಮತ್ತು ಮಹಾರಾಷ್ಟ್ರದ ನಾಂದೇಡ, ಔರಂಗಬಾದ ಪರಳಿ, ಲಾತೂರ ನಂತಹ ಪ್ರಮುಖ ಪಟ್ಟಣಗಳಿಗೆ ಸಾರಿಗೆ ವ್ಯವಸ್ಥೆ ಇದೆ. ಬೀದರ ಪಟ್ಟಣವನ್ನು ರೈಲ್ವೆ ಮಾರ್ಗದಿಂದ ಗುಲಬರ್ಗಾ ಜೋಡಿಸುವ ಕಾರ್ಯ ನಡೆದಿದೆ. ಕೆಲವೇ ದಿನಗಳಲ್ಲಿ ಪೂರ್ಣಗೊಳ್ಳಿಸಬಹುದು.

ಇಲ್ಲಿ ಏರಪೋರ್ಸ ತರಬೇತಿ ಕೇಂದ್ರವಿರುವುದರಿಂದ ಏರಪೋರ್ಸ ಏರಪೋರ್ಟ ಸಹ ಪಟ್ಟಣದ ದೂರವಲಯದ ಬೆದ್ರಿ ಬಳೀ ಇರುವುದರಿಂದ ವಿಮಾನಗಳು ಹೆಲಿಕಾಪ್ಟರಗಳು ಸಹ ಬೀದರಕ್ಕೆ ಬರುತ್ತವೆ. ಮತ್ತು ಇಲ್ಲಿಂದ ಪ್ರಪಂಚದ ಯಾವ ದಿಕ್ಕಿಗಾದರೂ ಪ್ರಯಾಣ ಬೆಳೆಸುವ ಹೆಗ್ಗಳಿಕೆ ಬೀದರ ತಾಲ್ಲೂಕಿನ ಜನರ ಸೌಭಾಗ್ಯ ತಾಲ್ಲೂಕಿನ ಜನರದ್ದಾಗುತ್ತದೆ.

# ಅಧ್ಯಾಯ – ೩

# ನಿಜಾಮ ಮತ್ತು ಬ್ರೀಟಿಷರ ಸಂಬಂಧಗಳು (೧೮೫೭–೧೯೪೮)

ಭಾರತದ ಸ್ವಾತಂತ್ರ್ಯ ಚಳುವಳಿಯು ಆಧುನಿಕ ವಿಶ್ವದ ಇತಿಹಾಸದಲ್ಲಿ ಒಂದು ಮಹತ್ವದ ಘಟನೆಯಾಗಿದೆ. ಕ್ರಿ.ಶ ೧೪೯೮ರಲ್ಲಿ ವಾಸ್ಕೋಡಿಗಾಮನು ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿದ ನಂತರ ಪೋರ್ಚಗೀಸರು, ಡಚ್ಚರು, ಇಂಗ್ಲೀಷರು ಮತ್ತು ಫ್ರೆಂಚರು ಭಾರತದಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಅವರಲ್ಲಿ ಆಂಗ್ಲರು ಮೇಲುಗೈ ಸಾಧಿಸಿ ಭಾರತೀಯರ ಅನೈತಿಕತೆ ಮತ್ತು ಅರಾಜಕತೆಯ ಲಾಭ ಪಡೆದು ಭಾರತದಲ್ಲಿ ತಮ್ಮ ರಾಜಕೀಯ ಚಕ್ರಾಧಿಪತ್ಯವನ್ನು ಸ್ಥಾಪಿಸಿದರು. ನಮ್ಮದು ಉನ್ನತ ಚರಿತ್ರೆ, ಉನ್ನತ ಸಂಸ್ಕೃತಿ, ಉನ್ನತ ಪರಾಕ್ರಮವನ್ನು ಹೊಂದಿದ ಪ್ರಾಚೀನ ದೇಶ ಆದಾಗ್ಯೂ ಕೂಡ 'ಮರೆಯಿಲ್ಲದ ಮತ ಮೌಢ್ಯತೆಯಲ್ಲಿ ಬ್ರಾಹ್ಮಣ ವಿಶಸಂಸ್ಕೃತಿ ಭ್ರಷ್ಟಾಚಾರಗಳಿಂದಾಗಿ ಕರಡು ಗಟ್ಟಿ ಅಜ್ಞಾನದ ಅಂದಕಾರದಲ್ಲಿ ಸಾವಿರಾರು ವರ್ಷಗಳಿಂದ ಪರದಾಡುತ್ತಿರುವ  ನಮ್ಮ ದೇಶಕ್ಕೆ ವಿಜ್ಞಾನಿಗಳು ನಾಗರಿಕತೆಯ ನಿರ್ಮಾಪಕರೂ ಆದ ಫೀರಂಗಿ ದೊರೆಗಳು ಎಡಗಾಲನ್ನು ನೆಲಕ್ಕೂರುವುದರೊಂದಿಗೆ ಹೇಗೋ ಕೊನೆಗೆ ಒಳ್ಳೆಯ ದಿನಗಳು ಬಂದವು. ಅವರು ದಯತೋರಿ ವಿದ್ಯಾಬುದ್ದಿ ಕಲಿಸಿದ್ದರಿಂದಾಗಿ ನಾವು ಹಳೆಯ ತೆವಲಿನಿಂದ ಹೊರ ಬಿದ್ದು ಶಾಸ್ತ್ರಿಯವಾಗಿ ತರ್ಕಬದ್ಧವಾಗಿ ಯೋಚಿಸುವುದು ಹೇಗೆಂಬುದನ್ನು ಕಲಿತುಕೊಂಡು ಆಧುನಿಕ ಸಂಸ್ಕಾರವನ್ನು ಅಳವಡಿಸಿಕೊಂಡೇವು'.[೧]

ಇಷ್ಟು ಉಪಕಾರಗಳನ್ನು ಮಾಡಿದ ಫೀರಂಗಿ ದೊರೆಗಳು ಸಾಮ್ರಾಜ್ಯವನ್ನು ಉಳಿಸಿಕೊಂಡು ತಮ್ಮ ಅದಿಪತ್ಯಕ್ಕೆ ಎದುರಿಲ್ಲದಂತೆ ನೋಡಿಕೊಳ್ಳಲು ವಲಸೇ ರಾಜ್ಯದಿಂದ ಇನ್ನಿಲ್ಲದ ಲಾಭಗಳಿಸಲು ತಮ್ಮ ದೇಶದ ಸ್ವಾರ್ಥ ಸಾಧನೆಗಳನ್ನು ರಕ್ಷಿಸಿಕೊಳ್ಳಲು ನಮಗೆ ಘೋರವಾದ ಅಪಕಾರಗಳನ್ನು ಸಹ ಮಾಡಿದರು. ಆಗ ನಮ್ಮ ರಾಷ್ಟ್ರಪಿತರು ಪಿತಾಮಹರು ಸೇರಿ ಕಾರ್ಯಪ್ರವ್ರತ್ತರಾಗಿ ಫಿರಂಗಿ ದೊರೆಗಳ ವಿಜ್ಞತೆಯಲ್ಲಿ ವಿಶ್ವಾಸಿಸವಿರಿಸಿ ಅನೇಕ ವಿಜ್ಞಾಪನೆಗಳನ್ನು ಮಾಡಿಕೊಳ್ಳಲಾಗಿ ವಿಜ್ಞಾಪನೆಗಳಿಂದ ಕೆಲಸ ನಡೆಯದಿದ್ದಾಗ ಅಹಿಂಸಾಯುತವಾಗಿ ಬ್ರೀಟಿಷ ಸಾಮ್ರಾಜ್ಯಕ್ಕೆ ಹೆಚ್ಚಿಗೇನು ಅಪಾಯವಾಗದ ರೀತಿಯಲ್ಲಿ ಗೌರವಯುತವಾಗಿ ಚಳುವಳಿಗಳನ್ನು ಮಾಡಿ ಲಾಠಿಗಳಿಗೆ ದೇಹವನ್ನೊಡ್ಡಿ ಅನೇಕ ದಶಕಗಳ ಕಾಲ ವಿರೋಚಿತವಾಗಿ ಕಷ್ಟಪಟ್ಟು ಕೊನೆಗೆ ಸ್ವಾತಂತ್ರವನ್ನು ಸಾಧಿಸಿದರು.

ದೇಶ ಚರಿತ್ರೆಯನ್ನು ಕುರಿತು ನಮ್ಮ ಆಧುನಿಕ ರಾಷ್ಟ್ರನಿರ್ಮಾಣವನ್ನು ಕುರಿತು ಅದರ ಘನ ಪರಂಪರೆಯನ್ನು ಕುರಿತು ಹೀಗೆ ಚಂದದಾದ ಚೊಕ್ಕದಾದ ರಾಷ್ಟ್ರೀಯ ಏಕಾಭಿಪ್ರಾಯವನ್ನು ಒಡಗೂಡಿದ ಮೇಲೆ ಅದಕ್ಕೆ ಅನುಗುಣವಾಗಿಲ್ಲದ ಘಟನೆಗಳು ಘರ್ಷಣೆಗಳು ಅವುಗಳ ಚರಿತ್ರೆಗಳನ್ನು ಕುರಿತು ಯೋಚಿಸುವುದು ಸಹಜವಾಗಿಯೇ ನಮಗೆ ಕಷ್ಟವೆನಿಸುತ್ತದೆ. ನಮಗೆ ತಿಳಿದಿರುವ ರಾಷ್ಟ್ರೀಯತೆ ನಾವು ತಿಳಿದಿರುವ ರಾಷ್ಟ್ರೀಯ ಚಳುವಳಿ ಕಣ್ಣು ಬಿಡುವುದಕ್ಕೆ ಅನೇಕ ದಶಕಗಳ ಪೂರ್ವದಲ್ಲಿಯೇ ೧೮೫೭ರಲ್ಲಿ ಈ ದೇಶದ ತುಂಬೆಲ್ಲಾ ಲಕ್ಷಾಂತರ ಜನರು ಆಯುಧಗಳನ್ನು ಹಿಡಿದು. "ವಿದೇಶಿ ರಾಕ್ಷಸಿಗಳ ಮೇಲೆ ವರ್ಷಕ್ಕಿಂತಲೂ ಮೇಲ್ಪಟ್ಟು ಭೀಕರ ಹೋರಾಟವನ್ನು ನಡೆಸಿದರು."[೨] ಆದರೆ ದೇಶದ ನಾನಾ ಭಾಗಗಳಲ್ಲಿ ನಡೆದ ಹೋರಾಟಗಳು ಕರ್ನಾಟಕದ ಹಲವು ಭಾಗಗಳಲ್ಲಿ ತೀವ್ರರೂಪದಲ್ಲಿ ಘಟಿಸಿರುವುದು ಇಲ್ಲ ಉಲ್ಲೇಖನಾರ್ಹ. ಅದರೂ ಸಹ ಬ್ರಿಟಿಷರ ಗುಲಾಮನಂತಿದ್ದ ಹೈದರಾಬಾದ ಸಂಸ್ಥಾನದ ನಿಜಾಮಾನು ಈ ಭಾಗದ ಜನತೆಯ ಹೋರಾಟವನ್ನು ಹತ್ತಿಕ್ಕುವ ಎಲ್ಲಾ ಪ್ರಯತ್ನಗಳನ್ನು ಮಾಡಿದ್ದನು. ಬೀದರ ಜಿಲ್ಲೆಯಾದ್ಯಂತ ಚಳುವಳಿ ತೀವ್ರರೂಪಡೆದಾಗ ಜನ ಸ್ವಾತಂತ್ರ್ಯ ಘೋಷಿಸಿ ಕೊಳ್ಳುವುವರೆಂಬ ಭಯ ನಿಜಾಮನಿಗೆ ಕಾಡುತ್ತಿತ್ತು.

### ೧. ನಿಜಾಮ ಸಂಸ್ಥಾನದ ಹಿನ್ನಲೆ:

ಹೈದ್ರಾಬಾದ ಕರ್ನಾಟಕದಲ್ಲಿ ನಡೆದ ಸ್ವಾತಂತ್ರ ಹೋರಾಟ ಹಾಗೂ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ನಡೆದ ಏಕೀಕರಣ ಹೋರಾಟದ ಚರಿತ್ರೆಯನ್ನು ಪೂರ್ಣವಾಗಿ ಅರಿಯಲು ಹಾಗೂ ಅದರ ಮಹತ್ವ ಗುರುತಿಸಲು ಈ ಸಂಸ್ಥಾನ ಹಾಗೂ ಪ್ರದೇಶಗಳಲ್ಲಿದ್ದ ಸರಕಾರದ ಸ್ವರೂಪ ಮತ್ತು ಆಳ್ವಿಕೆಗಳ ಅರಿವು ಅಗತ್ಯ ಭಾರತದಲ್ಲಿ ಅತ್ಯಂತ ಶ್ರೀಮಂತವಾಗಿದ್ದ "ಹೈದರಾಬಾದ ಸಂಸ್ಥಾನವನ್ನು "ಮೀರ ಖಮರುದ್ದಿನ್ ಚಿನ್ ಖಿಲಿಚಖಾನ್" ಎಂಬುವವನು ಸ್ಥಾಪಿಸಿದನು."[೩] ಇವನು ಉತ್ತರ ಮಾಳ್ವದಿಂದ ದಕ್ಷಿಣದ ತಿರುಚನಾಪಳ್ಳಿಯವರೆಗೆ ಹರಡಿದ್ದ ಇಡಿ ಧಖನ್ ಭಾಗವನ್ನು ಆಳುತ್ತಿದ್ದ. ಮುಂದೆ "ಮೊಘಲ ಸುಲ್ತಾನ 'ಮಹ್ಮದ್ ಶಾಹ' ಇವನಿಗೆ 'ಅಸಫಜಾಹ' ಎಂಬ ಬಿರುದನ್ನು ನೀಡಿದನು."[೪] ಇವನ ವಂಶಸ್ಥರು ಇಂದಿಗೂ ಇದೇ ಅಸಫಜಾಹ ಎಂಬ ಬಿರುದಿನಿಂದಲೇ ಗುರುತಿಸಲ್ಪಡುತ್ತಾರೆ. ೧೭೨೪ರ ಶಿಖಾರ ಖೇಡ ಯುದ್ಧದಲ್ಲಿ ಮುಖೇರಿಚ್‌ಖಾನನನ್ನು ಸೋಲಿಸಿ ನಿಜಾಮನು ಸ್ವತಂತ್ರ ಹೈದರಾಬಾದ ಸಂಸ್ಥಾನವನ್ನು ದಕ್ಷಿಣ ಭಾರತದಲ್ಲಿ ಸ್ಥಾಪಿಸಿದನು. ದೇಹಲಿಯ ಚಕ್ರವರ್ತಿಯ ಜೊತೆಗಿನ ಸಂಭಂಧವನ್ನು ಕಡೆದು ಹಾಕಿಕೊಂಡುನು ಹೀಗೆ ಸ್ವಾತಂತ್ರ ರಾಜ್ಯವನ್ನು ಘೋಷಿಸಿ ಹೈದರಾಬಾದ ನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಅರಮನೆ ಸ್ಥಾಪಿಸಿದನು. ಹೀಗೆ ಔರಂಗಜೇಬನ ಮರಣದ ನಂತರ ಉಂಟಾದ ಮೊಘಲ್ ಸಾಮ್ರಾಜ್ಯದ ವಿಘಟನೆಯೊಂದಿಗೆ ಅಸಫಜಾಹನ ಆಳ್ವಿಕೆ ಪ್ರಾರಂಭವಾಯಿತು.

ಕ್ರಿ.ಶ. ೧೭೨೪ರಿಂದ ೧೯೪೮ರ ಸೆಪ್ಟಂಬರ್ ೧೩ರ ಪೋಲಿಸ್ ಕಾರ್ಯಚರಣೆಯವರೆಗೆ ಹೈದ್ರಾಬಾದ ಸಂಸ್ಥಾನವನ್ನು ಏಳು ಮಂದಿ ನಿಜಾಮರು ಆಳ್ವಿಕೆಯನ್ನು ನಡೆಸಿದರು.

ಜೀವನದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಸಂಪತ್ತು ಮತ್ತು ಅಧಿಕಾರವನ್ನೆ ಓಲೈಸುತ್ತಿದ್ದ 'ಮೀರಉಸ್ಮಾನ ಬಹಾದ್ದೂರ'[೫] ಅಗಷ್ಟ ೨೯ ೧೯೧೧ರಂದು ಅಧಿಕಾರಕ್ಕೆ ಬಂದನು. ೧೯೩೭ರಿಂದ ೧೯೪೮ರ ವರೆಗೆ ಈತನ ಆಸ್ಥಾನದಲ್ಲಿ ಹಲವಾರು ವ್ಯಕ್ತಿಗಳು ಪ್ರಧಾನ ಮಂತ್ರಿಗಳಾಗಿ ಸೇವೆ ಸಲ್ಲಿಸಿದರು. ಮಜ್ಲೀಸ್ – ಎ– ಇಥ್ಥಹಾದ – ಉಲ್ – ಮುಸ್ಲಿಂನ್ ಸಂಸ್ಥೆಯು ಅತ್ಯಂತ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದವರೆಂದರೆ, ನವಾಬ ಬಹಾದ್ದೂರ ಯಾರ್‌ಜಂಗ ಮತ್ತು ಕಾಸಿಂ ರಜ್ವಿ ನಿಜಾಮನ ಆರ್ಶಿವಾದ ಹೊಂದಿದ್ದ ಇಥ್ಥೆಹಾದ ಸಂಸ್ಥಾನದ ರಾಜಕೀಯ ಹಾಗೂ ಧಾರ್ಮಿಕ ಹಿತಾಸಕ್ತಿಗಳನ್ನು ಘೋಷಿಸುತ್ತಿದ್ದ ಬಹುಮುಖ್ಯ ಕೋಮು ಶಕ್ತಿಯಾಗಿತ್ತು. ಹೈದರಾಬಾದ ಸಂಸ್ಥಾನದ ಜನತೆ ತನ್ನ ಸ್ವಾತ್ರ್ಯಂತ್ರ ಸಾರ್ವಭೌಮ ಅಧಿಕಾರವನ್ನು ಘೋಷಿಸಿಕೊಳ್ಳುವ ಒಂದೇ ಒಂದು ಅವಕಾಶವನ್ನು ನಿಜಾಮನು ಬಿಡುತ್ತಿರಲಿಲ್ಲ. ಬ್ರಿಟಿಷ ರೆಸಿಡೆಂಟನ ಸಲಹೆಯನ್ನು ಧಿಕ್ಕರಿಸಿ ತನ್ನದೇ ಆದ ಫಸಲಿಯಲ್ಲಿ ಫರಮಾನಗಳನ್ನು ಜಾರಿಗೊಳಿಸುತ್ತಿದ್ದ. ಆದರೆ ವಿಸ್ತರಣಾ ವಾದಿಗಳು ಹಾಗೂ ಯುದ್ದ ನಿಪುಣರಾದ ಪೇಶ್ವಗಳ ಅಧೀನದಲ್ಲಿದ್ದ "ಮರಾಠರು ನಿಜಾಮನನ್ನು ಶಾಂತಿ ನೆಮ್ಮದಿಯಿಂದ ಇರಲು ಬಿಡಲಿಲ್ಲ. ೧೭೬೧ರ ಪಾಣಿಪತ ಕದನದ ವಿನಾಷ್ಯಕಾರಿ ಪರಿಣಾಮ ವಿದೇಶಿ ಅಕ್ರಮಣಕಾರರ ರಾಜಕೀಯ ಪ್ರಭುತ್ವ ಹಾಗೂ ಮೈಸೂರಿನಲ್ಲಿ ಹೈದರಾಲಿಯ ಉದಯ ಮುಂತಾದವು ನಿಜಾಮನಿಗೆ ಆತಂಕ ಉಂಟುಮಾಡಿತು. ಈ ನಿಜಾಮನಲ್ಲಿ ಹೈದರಾಲಿಯ ರಾಜಕೀಯ ಚಾಣಾಕ್ಷತನವಾಗಲಿ ಅಥವಾ ನಾನಾ ಫಡ್ನವಿಸನ ಮುತ್ಸದಿತನವಾಗಲಿ ಅಥವಾ ಮಿಲಿಟರಿ ಜ್ಞಾನವಾಗಲಿ ನಿಜಾಮನಲ್ಲಿರಲಿಲ್ಲ."[೬] ಇದರಿಂದಾಗಿ ನೆರೆಹೊರೆಯ ರಾಜಕೀಯ ಶತ್ರುಗಳ ಆಕ್ರಮಣವನ್ನು ತಡೆಯಲು ಹಾಗೂ ತನ್ನ ಸ್ವಾತಂತ್ರ್ಯ ಮತ್ತು ಸಿಮೀತ ಸಾರ್ವಭೌಮತ್ವವನ್ನು ಕಾಯ್ದುಕೊಳ್ಳಲು ಅಂದು ಪ್ರವರ್ಧಮಾನಕ್ಕೆ ಬರುತ್ತಿದ್ದ ಬ್ರಿಟೀಷರ ನೆರವನ್ನು ಸಹಜವಾಗಿ ನಿಜಾಮನು ಬಯಸಿದನು.

ಬ್ರಿಟೀಷ ಗರ್ವನರ ಜನರಲ್ ಲಾರ್ಡ ವೆಲ್ಲಸ್ಲಿಯ ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದಕ್ಕೆ ೧೭೯೮ರಲ್ಲಿ ನಿಜಾಮನು ಸಹಿ ಹಾಕಿದನು. ಇದರೊಂದಿಗೆ ನಿಜಾಮನು ತನ್ನ ಸ್ವಾತಂತ್ರ್ಯವನ್ನು ಬ್ರಿಟಿಷರಲ್ಲಿ ಒತ್ತೆಯಿಟ್ಟನು. ಈ ಒಪ್ಪಂದದ ಪ್ರಕಾರ ನಿಜಾಮನು ಆರು ಬಟಾಲಿಯನ್ ಸೈನಿಕರಿಂದ ಕೂಡಿದ್ದ ಸಹಾಯಕ ಸೈನ್ಯದ ವಾರ್ಷಿಕ ೨೪೧೭೦೦೦ ರೂಪಾಯಿಗಳನ್ನು ಭರಿಸಬೇಕಾಯಿತು. ಅಲ್ಲದೇ ನಿಜಾಮ ಮತ್ತು ಪೇಶ್ವೆಯ ನಡುವಿನ ರಾಜಕೀಯ ಸಂಭಂಧವನ್ನು ನಿರ್ಧರಿಸುವ ಅಧಿಕಾರ ಬ್ರಿಟಿಷರ ಪಾಲಾಯಿತು.

ಭಾರತದಲ್ಲಿ ಬ್ರಿಟೀಷರು ತಮ್ಮ ಪರಮಾಧಿಕಾರವನ್ನು ಕಾಯ್ದುಕೊಳ್ಳಲು ಮತ್ತು ಮರಾಠರ ಹಾಗೂ ಮೈಸೂರು ಶಕ್ತಿಗಳನ್ನು ನಿಯಂತ್ರಿಸಲು ಹೈದರಾಬಾದ ಸಂಸ್ಥಾನವನ್ನು ಒಂದು ಬಂಪರ ರಾಜ್ಯವನ್ನಾಗಿ ಬಳಸಿಕೊಂಡರು. ೧೮೫೭ರ ಸ್ವಾತಂತ್ರ್ಯ ಸಂಗ್ರಾಮದ ಅಲೆಗಳನ್ನು ದಕ್ಷಿಣ ಭಾರತದಲ್ಲಿ ವ್ಯಾಪಕವಾಗಿ ಹರಡದಂತೆ ತಡೆದಿದ್ದನ್ನು ಗಮನಿಸದರೆ ಬ್ರಿಟಿಷರಿಗೆ ನಿಜಾಮ ಶಕ್ತಿಯ ಅನಿವಾರ್ಯತೆ ಗೊತ್ತಾಗುತ್ತದೆ. "ಪ್ರಥಮ ಜಾಗತಿಕ ಯುದ್ದದ ಸಮಯದಲ್ಲಿ ನಿಜಾಮನು ಬ್ರಿಟನ್ನಿಗೆ ೩೭೫ ಲಕ್ಷ ಹಣ ಮತ್ತು ಸೇನಾ ತುಕುಡಿಗಳನ್ನು ಕಳುಹಿಸಿದನು."[೬] ೨ನೇ ಜಾಗತಿಕ ಯುದ್ದದ ಕಾಲಕ್ಕೆ ಹೈದರಾಬಾದ ಸಂಸ್ಥಾನದ ಎಲ್ಲಾ ಉದ್ದಿಮೆಗಳು ಬ್ರಿಟಿಷರಿಗೆ ಪೂರೈಸುವ ಯುದ್ಧೋಪಕರಣ ಉತ್ಪಾದನೆಯಲ್ಲಿ ತೊಡಗಿದ್ದವು ಹೀಗೆ ನಿಜಾಮ ಸಂಸ್ಥಾನ ತನ್ನ ಅಸ್ತಿತ್ವ ರಕ್ಷಿಸಿಕೊಳ್ಳಲು ಬ್ರಿಟಿಷ ಸಾಮ್ರಾಜ್ಯದ ಅನನ್ಯ ಭಕ್ತರಾಗಿದ್ದರು. ಇದಕ್ಕೆ ಪ್ರತಿಫಲವಾಗಿ ಬ್ರಿಟಿಷ ಸರಕಾರವು ನಿಜಾಮನಿಗೆ 'ಹಿಟ್ ಎಕ್ಸಾಲ್ಟೆಡ್ ಹೈನೆಸ್' ಹಾಗೂ 'ಫೇತ್‌ಫುಲ್ ಅಲೈ ಆಫ್ ದಿ ಬ್ರಿಟೀಷ್ ಗವರ್ನಮೆಂಟ್'[೭] ಎಂಬ ಬಿರುದುಗಳನ್ನು ನೀಡಿ ಗೌರವಿಸಿತು. ಈ ಹಿನ್ನಲೆಯಲ್ಲಿ ಬ್ರಿಟೀಷ ಸರಕಾರವು ನಿಜಾಮನಿಗೆ ಅನೇಕ ಸೌಲಭ್ಯಗಳನ್ನು ಆಂತರಿಕ ಅಧಿಕಾರವನ್ನು ದೊರಕಿಸಿತು. ನಿಜಾಮನು ತನ್ನ ಸಂಸ್ಥಾನದಡಿ ತನ್ನದೆಯಾದ ಸ್ವತಂತ್ರ್ಯ ಧ್ವಜ, ರಾಷ್ಟ್ರ ಗೀತೆ, ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಶಿಕ್ಷಣ ವ್ಯವಸ್ಥೆಯ ಸೌಲಭ್ಯಗಳನ್ನು ಹೊಂದಿದನು.

## ೨. ೧೮೫೭ರ ದಂಗೆ ಮತ್ತು ಪರಿಣಾಮ:

೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಹೈದರಾಬಾದ ಸಂಸ್ಥಾನವನ್ನು ೫ನೇ ನಿಜಾಮ ಅಪಜಾಲ್ ದೌಲ ಬಹಾದ್ದೂರ್ ಎಂಬವವನು ಆಳುತ್ತಿದ್ದನು. ಒಂದೇ ಸಾಲರ್ ಜಂಗನು ಈತನ ಪ್ರಧಾನ ಮಂತ್ರಿಯಾಗಿದ್ದ. ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ ಪೇಶ್ವೆ ನಾನಾ ಸಾಹೇಬನ ಕರೆಯಂತೆ ಕರ್ನಾಟಕದ ಹಮ್ಮಿಂಗೆ ಕೆಂಚನಗೌಡ, ಮುಂಡರಗಿ ಭೀಮರಾವ, ಸುರಪುರದ ರಾಜ ವೆಂಕಟಪ್ಪ ನಾಯಕ ಮತ್ತು ಬೀದರ ತಾಲೂಕಿನ ಹಲವಾರು ಸ್ವತಂತ್ರ್ಯ ಹೋರಾಟಗಾರರು ಇನ್ನುಳಿದ ಅನೇಕರು ಬ್ರಿಟೀಷರ ಆಳ್ವಿಕೆ ಮತ್ತು ದಾಸ್ಯದಿಂದ ಮುಕ್ತರಾಗಲು ಪ್ರಯತ್ನಿಸಿದರು. ಆದರೇ ಹೈದರಾಬಾದ ಸಂಸ್ಥಾನದಲ್ಲಿನ ಪರಿಸ್ಥಿತಿ ಇವುಗಳಿಂದ ಭಿನ್ನವಾಗಿದ್ದಿತ್ತು. ಕಾರಣ ನಿಜಾಮ ಬ್ರಿಟಿಷರೆಂಬ ಅಂಕುಶವನ್ನು ಸಂಸ್ಥಾನದಲ್ಲಿನ ರಾಷ್ಟ್ರೀಯ ಚಳುವಳಿಯನ್ನು ಹತ್ತಿಕ್ಕಲು ಉಪಯೋಗಿಸಿಕೊಂಡಿದ್ದನು. ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಬೇಕೆಂಬ ಈ ಭಾಗದ ಜನತೆಯ ಆಶೋತ್ತರಗಳಿಗೆ ನಿಜಾಮನು ಮತ್ತು ಆತನ ಮಂತ್ರಿ ಸಾಲರ್ ಜಂಗರು ತಣ್ಣಿರೆರಚಿದರು.

ಬ್ರಿಟಿಷ ಸಾಮ್ರಾಜ್ಯದ ವಿರುದ್ಧ ನಡೆಯುತ್ತಿದ್ದ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಲು ಹೈದರಾಬಾದಿನ ನಿಜಾಮನ ಬೆಂಬಲ ಅತಿ ಅವಶ್ಯಕ ಎಂಬ ಅಂಶವನ್ನು ಬಾಂಬೆ ಪ್ರಾಂತದ ಗವರ್ನರನು ಗವರ್ನರ ಜನರಲ್‌ಗೆ ಬರೆದ ಒಂದು ಪತ್ರದಲ್ಲಿ ಹೀಗಿದೆ 'ನಿಜಾಮನನ್ನು ಕೈ ಬಿಟ್ಟರೇ ಎಲ್ಲವೂ ಕೈ ಬಿಟ್ಟಂತೆ'೯ ಇದು ಅವರೀರ್ವರ ಅವಲಂಬಿತನವನ್ನು ತೋರ್ಪಡಿಸುತ್ತದೆ.

೧೮೫೭ರ ನಂತರ ನಿಜಾಮನು ಬ್ರಿಟಿಷರಿಂದ ಅಸಫಜಹಾ ಧ್ವಜ, ರಾಷ್ಟ್ರಗೀತೆ, ಕಂದಾಯ, ಹಣದ ಮುದ್ರಣ, ಪೋಲಿಸು, ಬ್ಯಾಂಕು, ಸಾರಿಗೆ, ಉದ್ದಿಮೆ ಮುಂತಾದ ಕ್ಷೇತ್ರಗಳಲ್ಲಿ ಪೂರ್ಣ ಅಧಿಕಾರವನ್ನು ಪಡೆದುಕೊಂಡನು. ೧೯೨೬ರಲ್ಲಿ ನಿಜಾಮನು ಇದನ್ನು ದುರುಪಯೋಗ ಪಡಿಸಿಕೊಂಡು ಬ್ರಿಟಿಷರಿಗೆ ಸಮಾನವಾದ ಸ್ಥಾನಮಾನ ಪಡೆಯಲು ಹವಣಿಸಿದನು. ಆದರೆ ಗವರ್ನರ ಜನರಲ್ ಲಾರ್ಡ ರೀಡಿಂಗ್‌ನು ಅದನ್ನು ಹತ್ತಿಕ್ಕಿದನು. ಹೈದರಾಬಾದ ಸಂಸ್ಥಾನವನ್ನು ತಮ್ಮ ಹತೋಟಿಗೆ ಪಡೆಯಲು ೧೯೨೭ರ ಮಾರ್ಚ ೨೭ರಂದು ನಾಲ್ವರು ಬ್ರಟೀಷ ಅಧಿಕಾರಿಗಳನ್ನು ನೇಮಿಸಲಾಯಿತು. ವೈಸರಾಯನು ತನ್ನ ಒಂದು ಸಂದೇಶದಲ್ಲಿ 'ನಿಜಾಮನ ಸಂಸ್ಥಾನವು ಭಾರತದ ಉಳಿದೆಲ್ಲಾ ಸಂಸ್ಥಾನಿಕರ ಸ್ಥಾನಮಾನಕ್ಕಿಂತ ಯಾವುದೇ ವಿಧದಲ್ಲಿ ಭಿನ್ನವಿಲ್ಲ'.೧೦ ಎಂದು ಘೋಷಿಸಿದನು.

ಈ ಕಾಲಕ್ಕೆ ೧೯೩೦ರಲ್ಲಿ ಮಹಾತ್ಮ ಗಾಂಧಿಜೀಯವರ ಮುಂದಾಳತ್ವದಲ್ಲಿ ಜನತೆಯು 'ಪ್ರಾತಿನಿಧ್ಯ ಕೊಡುವವರೆಗೆ ತೆರಿಗೆ ನೀಡುವುದಿಲ್ಲ'. ಎಂಬ ಬಲವಾದ ನಿರ್ಧಾರಕ್ಕೆ ಬಂದಿತು. ಇದಕ್ಕೆ ಹೈದರಾಬಾದ ಸಂಸ್ಥಾನ ಹೊರತಾಗಿರಲಿಲ್ಲ. ಕಾರಣ ನಿಜಾಮನು ಸಂಸ್ಥಾನದಲ್ಲಿನ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಲು ಬ್ರಿಟಿಷ ಸರಕಾರದ ನೆರವು ಬೇಕೆಂಬ ನಿರ್ಧಾರಕ್ಕೆ ಬಂದನು. ಇದರಿಂದಾಗಿ ನಿಜಾಮನ್ನು ಬ್ರಿಟಿಷರ ನಿಷ್ಠಾವಂತ ಸಾಮಂತನಾಗಿ ಉಳಿದುಕೊಂಡನು. ಬ್ರಿಟಿಷ ರೆಸಿಡೆಂಟರು ಮತ್ತು ಇತ್ತೆಹಾದನ ಮಾರ್ಗದರ್ಶನದಲ್ಲಿದ್ದ ಕೊನೆಯ ನಿಜಾಮ ಮಿರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ ಜನತೆಯ ಬೆಡಿಕೆಗಳ ಬಗ್ಗೆ ಜಾಣ ಕುರುಡತನವನ್ನು ಪ್ರದರ್ಶಿಸುತ್ತಿದ್ದನು.

**೩. ಸಂವಿಧಾನಾತ್ಮಕ ಸುಧಾರಣೆಗಳು:**

ಬ್ರಿಟೀಷರು ರೌಲತ್‌ಕಾಯಿದೆ, ಜಲಿಯಾನ್ ವಾಲಾಬಾಗ್ ಹತ್ಯಾಕಾಂಡ, ಖಿಲಾಫತ್ ಚಳುವಳಿಗಳ ಪ್ರಭಾವದಿಂದಾಗಿ ಭಾರತದ ಮೇಲಿನ ತಮ್ಮ ದಮನಕಾರಿ ನೀತಿಯನ್ನು ತ್ಯಜಿಸಿ, ಸ್ವಲ್ಪ ಮಟ್ಟಿನ ಸುಧಾರಣೆಗಳನ್ನು ಜಾರಿಗೆ ತರುವಂತೆ ಜಾಣತನ ಮಾಡಿದ ಅದರ ಫಲವಾಗಿ ೧೯೧೯ರಲ್ಲಿ "ಜೇಮ್ಸ ಮೌಂಟೆಗೋ ಜೆಮ್ಸಪೊರ್ಡ" ಸುಧಾರಣೆಗಳು ಆಸ್ತಿತ್ವಕ್ಕೆ ಬಂದವು.

ಬ್ರಿಟೀಷ ಭಾರತದಲ್ಲಾಗುತ್ತಿದ್ದ ಏರುಪೇರುಗಳನ್ನು ಗಮನಿಸಿದ ನಿಜಾಮನು ೧೯೩೯ ರಲ್ಲಿಯೇ ರಾಜಕೀಯ ಸುಧಾರಣೆಗಳನ್ನು ಜಾರಿಗೆ ತರುವ ಸಲುವಾಗಿ 'ಸರ್ ಅಲಿ ಇಮಾಮ್' ಆಯೋಗವನ್ನು ರಚಿಸಿದನು ಆದರೆ ಇಮಾಮ್ ರಾಜಿನಾಮೆಯಿಂದಾಗಿ ಕೆಲಸ ಅರ್ಧಕ್ಕೆ ನಿಂತಾಗ 'ಆರ್.ಬಿ.ಮುಗ್ದಮ್ಮ'ರನ್ನು ನೇಮಿಸಲಾಯಿತು. ಆದರೆ ಆಯೋಗ ನೀಡಿದ ಸಲಹೆ ಸೂಚನೆಗಳನ್ನು, ನಿಜಾಮನು ಒಪ್ಪದೆ, ಸಂಸ್ಥಾನದ ಜನತೆಯನ್ನು ಸಂವಿಧಾನಿಕ ಸುಧಾರಣೆಗಳಿಂದ ದೂರವಿಡಲು ಪ್ರಯತ್ನಿಸಿದನು. ಆದ್ದರಿಂದ ಜಿಲ್ಲಾ ನಾಯಕರ ಮುಂದಾಳತ್ವದಲ್ಲಿ ಬೀದರ ಜಿಲ್ಲೆಯ ಬೀದರ ತಾಲೂಕಿನ ರಂಗನಾಥರಾವ್ ಸಾಯಗಾಂಕರ್, ಬ್ರಿಜಪಾಲ್‌ಸಿಂಗ್ ಠಾಕೂರ, ಮಾಣಿಕರಾವ್ ಚೌಧರಿ, ಗುರಪ್ಪ ಲಾಡಗೇರಿ, ನಾನಾರಾವ್ ಕುಮಠೇಕರ್, ಅಪ್ಪಾರಾವ್ ಶೇಟಕಾರ, ಕೆ.ಎಸ್.ರಾಜ್ ಮಾಸ್ತರ್ ಅನೇಕರು ತಾಲ್ಲೂಕಿನಾದ್ಯಂತ ಜನರ ಗಮನ ಸೆಳೆಯಲು ಕರಪತ್ರ ಮುದ್ರಿಸಿ, ಹಂಚುವ ಭೂಗತ ಕೆಲಸಕ್ಕೆ ಕೈ ಹಾಕಿದರು.

೧೯೩೫ ರ ಕಾಯ್ದೆಯಂತೆ ಬ್ರಿಟಿಷರು ಪ್ರಾಂತೀಯ ಸ್ವಾಯತ್ತತೆಯನ್ನು ಘೋಷಿಸಿದರು. ಇಂತಹ ಪ್ರಾಂತೀಯ ಸ್ವಾಯತ್ತತೆಯನ್ನು ಹೈದರಾಬಾದ್ ಸಂಸ್ಥಾನಿನ ಜನರು ಕೂಡಾ ಬಯಸಿದರು. ಆದರೆ ನಿಜಾಮನ ನೀತಿ ಇವೆಲ್ಲವುದರಗಳಿಂದ ಬಹು ದೂರ ಉಳಿದಿತ್ತು ೧೯೩೮ ರಲ್ಲಿ ರಾಜಕೀಯ ಮತ್ತು ನಾಗರಿಕ ಹಕ್ಕುಗಳಿಗಾಗಿ ಆರ್ಯಸಮಾಜ ಹಿಂದೂ ಮಹಾ ಸಭಾ ರಾಜ್ಯ ಕಾಂಗ್ರೆಸ್‌ಗಳ ನೇತೃತ್ವದಲ್ಲಿ ಸತ್ಯಾಗ್ರಹ ಚಳುವಳಿ ಬೀದರ ಜಿಲ್ಲೆಯಾದ್ಯಂತ ಪಸರಿಸಿತು. ಅದರಂತೆ ಬೀದರ ತಾಲೂಕಿನ ಬಹುತೇಕ ಹೋರಾಟಗಾರರು ಆರ್ಯ ಸಮಾಜ ಮತ್ತು ಹಿಂದೂ ಮಹಾಸಭಾದ ಕಾರ್ಯಕರ್ತರಾಗಿದ್ದರು. ರಂಗನಾಥರಾವ್ ಸಾಯಗಾಂವಕರ್, ಅಪ್ಪಾರಾವ್ ಶೇಠಗಾರ, ಬಿಜಪಾಲಸಿಂಗ್ ಠಾಕೂರ. ಮಾಣೀಕರಾವ್ ಘೂಲೆಕರ್, ಶ್ರೀನಿವಾಸರಾವ್ ಹವಾಲ್ದಾರ್ ಮುಂತಾದವರು ತಾಲ್ಲೂಕಿನಾದ್ಯಂತ ಸಂವಿಧಾನಿಕ ಸುಧಾರಣೆಗಳಿಗಾಗಿ ಚಳುವಳಿಗಳನ್ನು ಹೂಡಿದರು. ಇದರ ಪರಿಣಾಮವಾಗಿ, ನಿಜಾಮನು ೧೯೩೮ ರಲ್ಲಿ "ದೇವಧೂತ ಸಿದ್ಧಾಂತ"ವನ್ನು ಕೈ ಬಿಡಬೇಕಾಯಿತು.

ಅಂತಿಮವಾಗಿ ನಿಜಾಮನು "ದಿವಾನ ಬಹಾದ್ದೂರ ಅರ್ವಮುದ್ದು ಅಯ್ಯಾಂಗರ್" ಅವರ ನೇತೃತ್ವದಲ್ಲಿ ಆಯೋಗವೊಂದನ್ನು ರಚಿಸಿದನು ಇದು ೮೮ ಜನರಿರುವ ಪ್ರಜಾ ಪರಿಷತ್ತಿನಲ್ಲಿ ಶೇ. ೧೨% ರಷ್ಟಿರುವ ಮುಸ್ಲಿಂರಿಗೆ ಶೇ ೫೦ ರಷ್ಟು ಹಾಗೂ ಶೇ. ೮೮% ರಷ್ಟಿರುವ ಇನ್ನುಳಿದ ಹಿಂಧೂಗಳಿಗೆ ಶೇ ೫೦% ರಷ್ಟು ಪ್ರಾತಿನಿದ್ಯವನ್ನು ನೀಡಲು ಸೂಚಿಸಿತು. ಒಂದೆಡೆ ಬ್ರಟಿಷರು ರಾಷ್ಟ್ರೀಯ ಚಳುವಳಿಯನ್ನು ಹತ್ತಿಕ್ಕಲು ೧೯೩೫ ರ ಕಾಯ್ದೆಯನ್ನು ಬಳಸಿದರು.

ಆದ್ದರಿಂದ 'ನೆಹರೂ' ಅವರು ಅದನ್ನು ಕುರಿತು "೧೯೩೫ ರ ಕಾಯ್ದೆಯು ಗುಲಾಮಗಿರಿತನದ ಹೊಸ ಸನ್ನದು"[೧೧] ಎಂದು ಟೀಕಿಸಿದರು. ಇನ್ನೊಂದೆಡೆ ಬ್ರಿಟಿಷರ ಹಿಂಬಾಲಕನಂತೆ ವರ್ತಿಸುತ್ತಿದ್ದ ನಿಜಾಮನು ಕೂಡಾ ಈ ಕಾಯ್ದೆಯನ್ನು ಹೈದರಾಬಾದ್ ಕರ್ನಾಟಕದ ರಾಷ್ಟ್ರೀಯವಾದಿಗಳ ಮನವೊಲಿಸಲು ಬಳಸಿಕೊಂಡನು ಎಂದು 'ಸ್ವಾಮಿ ರಮಾನಂದ ತೀರ್ಥರು' ಟೀಕಿಸಿದರು.

೧೯೪೨ ರ ಹೊತ್ತಿಗೆ ಶಾಂತಿದೂತ ಮಹಾತ್ಮ ಗಾಂಧೀಜೀಯವರು ಕೂಡಾ ತಮ್ಮ ತಾಳ್ಮೆ ಕಳೆದುಕೊಂಡವರಂತೆ ಕಂಡು ಬಂದಿದ್ದು. ಬ್ರಿಟಿಷರಿಗೆ ನುಂಗಲಾರದ ತುತ್ತಾಯಿತು. ಕಾರಣ ಗಾಂಧೀಜೀಯವರು ೧೯೪೨ ರಲ್ಲಿ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಮೂಲಕ ಅಖಂಡ ಭಾರತೀಯರಿಗೆ ಮಡಿಯುವುದಕ್ಕಿಂತ ಪೂರ್ವದಲ್ಲಿ ದೇಶಕ್ಕಾಗಿ ಏನಾದರೂ ಮಾಡಿ ಎಂಬರ್ಥದಲ್ಲಿ 'ಮಾಡು ಇಲ್ಲವೆ ಮಡಿ' ಎಂದು ಉದ್ಗರಿಸಿದರು. ಅಂತೆಯೇ ಬಹು ದಿನಗಳಿಂದಲೂ ಬೀದರ ತಾಲ್ಲೂಕಿನಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಚಳುವಳಿಗೆ ಹೊಸ ಕಳೆ ಬಂದಂತಾಗಿ ತೀವ್ರ ರೀತಿಯಲ್ಲಿ ಅದು ಮುಂದುವರಿಯಿತು. ಈ ಕಬ್ಬಿಣದ ಕಡಲೆಯ ಹೋರಾಟವನ್ನು ಮನಗಂಡು ಬ್ರಿಟನ್ ಪ್ರಧಾನಿ ಆಟ್ಲೆ ಫೇಬ್ರವರಿ ೨೦, ೧೯೪೭ ರಂದು ಭಾರತದ ವಿಷಯಗಳಿಗೆ ಸಂಭಂದಿಸಿದ ಘೋಷಣೆಯನ್ನು ಹೊರಡಿಸಿ, ಜೂನ್ ೧೯೪೮ ರ ವೇಳೆಗೆ ಭಾರತೀಯರಿಗೆ ಅಧಿಕಾರವನ್ನು ವರ್ಗಾವಣೆ ಮಾಡುವುದಾಗಿ ಸಾಮಾನ್ಯ ಸಭೆಯಲ್ಲಿ ಹೇಳಿಕೆಯೊಂದನ್ನು ನೀಡಿದನು. ಈ ಅಧಿಕಾರಿ ಹಸ್ತಾಂತರದ ಉಸ್ತುವಾರಿ 'ಲಾರ್ಡ ಮೌಂಟ್ ಬ್ಯಾಟನ್'ರ ಹೆಗಲೇರಿತು. ಈ ಕಾಲಕ್ಕೆ ಭಾರತಾದ್ಯಂತ ವ್ಯಾಪಿಸಿದ್ದ ಕೋಮುಜ್ವಲೆಯ ವಿಷಮ ಸ್ಥಿತಿಯ ಕುರಿತು ಅಧ್ಯಯನವನ್ನು ಕೈಗೊಂಡ ಬ್ಯಾಟನ್ನೆರು ಈ ಸ್ಥಿತಿಯಲ್ಲಿ ಒಕ್ಕೂಟ ರಚನೆ ಅಸಾಧ್ಯ ಮತ್ತು ವೆಂಬ ತೀರ್ಮಾನಕ್ಕೆ ಬಂದರು.

ಅದರ ಪ್ರಕಾರ ಭಾರತವನ್ನು ಕೋಮುವಿನ ಆಧಾರದ ಮೇಲೆ ವಿಭಜಿಸುವುದು ಅನಿವಾರ್ಯವೆಂದು ಸಾರಲಾಯಿತು. 'ಬ್ರಿಟಿಷ ಪಾರ್ಲಿಮೆಂಟನ' ೧೯೪೭ ರ ಭಾರತದ ಸ್ವಾತಂತ್ರ್ಯ ಅಧಿನಿಯಮ' ದ ಪ್ರಕಾರ ಅಖಂಡ ಭಾರತವನ್ನು ಎರಡು ಭಾಗಗಳಾಗಿ, ಭಾರತದ ಅಂದಿನ ೫೬೨ ಸಂಸ್ಥಾನಗಳು ಸ್ವತಂತ್ರ್ಯವಾಗಿರುವ ಅಥವಾ ಭಾರತ ಮತ್ತು ಪಾಕಿಸ್ತಾನದ ಒಕ್ಕೂಟ ಸೇರುವ ಸ್ವಾತಂತ್ರ್ಯವನ್ನು ನೀಡಲಾಯಿತು. ಈ ಅಂಶದ ಸದುಪಯೋಗ ಮಾಡಿಕೊಳ್ಳುವಲ್ಲಿ ಹೈದರಾಬಾದ ಸಂಸ್ಥಾನದ ನಿಜಾಮನು ಕಾತುರನಾಗಿದ್ದನು. ಕಾರಣ ಬೀದರ ನಾಯಕರು ಮತ್ತು ಜನತೆ ಇಲ್ಲಿಯವರೆಗೆ ಸಂಸ್ಥಾನದ ಜನತೆಯ ಹೆಗಲಿಗೆ ಹೆಗಲು ನೀಡಿ ಬ್ರಿಟೀಷರ ವಿರುದ್ಧ ಹೋರಾಡಿದ ನಂತರ, ಮತ್ತೇ ಅಂತಹುದೇ ಸ್ವಾತಂತ್ರ್ಯ ಚಳುವಳಿಗೆ ಅಣಿಗೊಳ್ಳುವ ಅನಿವಾರ್ಯತೆಗೆ ಸಿಲುಕಿಕೊಂಡರು.

ಭಾರತದ ಹೃದಯ ಭಾಗದಲ್ಲಿ ಇನ್ನೊಂದು ಛೋಟಾ ಪಾಕಿಸ್ತಾನ' ಸ್ಥಾಪಿಸುವ ಹುಚ್ಚು ಸಾಹಸಕ್ಕೆ ನಿಜಾಮನು ಜೋತು ಬಿದ್ದು ಭಾರತದ ಒಕ್ಕೂಟ ಸೇರಲು ನಿರಾಕರಿಸಿದನು. ಕಾರಣ ಈ ಭಾರತವೇ ೧೫ ಅಗಸ್ಟ್ ೧೯೪೭ ರಂದು ಸ್ವಾತಂತ್ರ್ಯದ ಉನ್ಮಾದದಲ್ಲಿ ತೇಲುತ್ತಿದ್ದರೆ. ಹೈದರಾಬಾದ್ ಸಂಸ್ಥಾನದಡಿ ಜನತೆ ಇನ್ನೂ ನಿಜಾಮನ ಕಪಿ ಮುಷ್ಠಿಯಿಂದ ಹೊರಬಂದಿರಲಿಲ್ಲ. ಇದೆಲ್ಲದರ ಪರಿಣಾಮವಾಗಿ ಬೀದರ ಜಿಲ್ಲೆಯ ಪ್ರತಿ ತಾಲ್ಲೂಕಗಳಲ್ಲಿ ನಡೆದ ಸ್ವಾತಂತ್ರ್ಯ ಮತ್ತು ಜವಾಬ್ದಾರಿ ಸರಕಾರದ ಚಳುವಳಿಗಳು ಬೀದರ ತಾಲೂಕಿನಲ್ಲಿ ನಡೆಯಿತು. ತಾಲೂಕಿನ ಹೋರಾಟವು ಶ್ರೀರಂಗನಾಥರಾವ್ ಸಾಯಗಾಂವಕರ್, ಅಪ್ಪಾರಾವ್ ಶೇಟಗಾರ, ಬ್ರಿಜಪಾಲಸಿಂಗ್ ಠಾಕೂರ. ಮಾಣಿಕರಾವ್ ಘೂಲೆಕರ್, ಶ್ರೀನಿವಾಸರಾವ್ ಹವಾಲ್ದಾರ್ ಮುಂತಾದ ತಾಲ್ಲೂಕಿನ ವಿವಿಧಡೆಯ ನಾಯಕರುಗಳ ನೇತೃತ್ವದಲ್ಲಿ ನಡೆದು ಕೊನೆಗೆ ಭಾರತ ಸ್ವಾತಂತ್ರ್ಯ ಸಂಗ್ರಾಮದ ಅಂತಿಮ ಯುದ್ಧ ಹೈದರಾಬಾದ ಸಂಸ್ಥಾನದ ನೆಲದ ಮೇಲೆ ಸೆಪ್ಟೆಂಬರ್ ೧೩, ೧೯೪೮ ರಂದು ನಡಿಯಬೇಕಾಯಿತು.

## ಅಡಿ ಟಿಪ್ಪಣಿಗಳು

೦೧) ಶಾಸ್ತ್ರಿ ಎಮ್. ವಿ. ಆರ್. ಸಂಕ್ಷಿಪ್ತನುವಾದ ಶಾರದಾ ಕೆ. ಮರೆತು ಹೋದ ಮಹಾಯುದ್ಧ ಪು – ೬

೦೨) ಅದೇ, ಪು . ೭

೦೩) ಮಹಾಬಲೇಶ್ವರಪ್ಪಾ. ಬಿ.ಸಿ; ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು, ಪು. – ೧೨

೦೪) ಅದೇ, ಪು. – ೧೨

೦೫) ಅದೇ, ಪು. – ೧೨

೦೬) ಅದೇ, ಪು. – ೧೨ ಮತ್ತು ೧೩

೦೭) ಅದೇ, ಪು. – ೧೩

೦೮) ಅದೇ, ಪು. – ೧೧

೦೯) ಅದೇ, ಪು. – ೧೫

೧೦) ಅದೇ, ಪು. – ೧೫

೧೧) ಸದಾಶಿವ. ಕೆ; ಸಮಗ್ರ ಭಾರತದ ಇತಿಹಾಸ, ಪು. – ೧೭೦

# ಅಧ್ಯಾಯ – ೪

# ಬೀದರ ತಾಲ್ಲೂಕಿನಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ

## ರಾಷ್ಟ್ರೀಯತೆ ಮತ್ತು ಗ್ರಂಥಾಲಯ ಚಳುವಳಿ

"ರಾಷ್ಟ್ರೀಯತೆ ಎಂದರೇನು ತಮ್ಮ ಜನತೆ ರಾಷ್ಟ್ರ, ಭಾಷೆ, ಸಂಸ್ಕ್ರತಿ ಮತ್ತು ಜನಾಂಗಗಳ ಬಗ್ಗೆ ಹೊಂದಿರುವ ಪ್ರೇಮ. ರಾಷ್ಟ್ರೀಯತೆ ಎಂಬ ಪರಿಕಲ್ಪನೆಯು ಜನಾಂಗಿಯ ರಕ್ತ ಸಂಬಂಧದ ಅಥವಾ ಹುಟ್ಟಿನಿಂದ ಬಂದ ಸಂಭಂಧದ ಅರ್ಥವನ್ನು ಪಡೆದಿದೆ."[೧] ಮೊದಲನೆಯದಾಗಿ ರಾಷ್ಟ್ರೀಯತೆಯು ಒಂದು ಭಾವನಾತ್ಮಕ ಗುಣವಾಗಿದೆ. ರಾಷ್ಟ್ರೀಯತೆಗೆ ಒಳಗಾದ ವ್ಯಕ್ತಿ ಭಾವೋದ್ವೇಗಕ್ಕೆ ಒಳಗಾಗುತ್ತಾನೆ. ಒಂದಾಗುವಿಕೆಯ, ಐಕ್ಯತೆಯ ಭಾವನಾತ್ಮಕ ಗುಣವೇ ರಾಷ್ಟ್ರೀಯತೆ, ತಮ್ಮ ಜನಾಂಗ ಧರ್ಮ, ಭಾಷೆ, ಸಂಸ್ಕೃತಿ ರಾಜ್ಯ ಹಾಗೂ ಮಾತೃಭೂಮಿಯ ಬಗ್ಗೆ ಜನತೆಯು ತೋರುವ ಅದಮ್ಯ ವಾತ್ಸಲ್ಯ ಹಾಗೂ ಪ್ರೀತಿಯೇ ರಾಷ್ಟ್ರೀಯತೆ ಮನುಷ್ಯ ತಾಯ್ನಾಡನ್ನು ಪ್ರೀತಿಸುವುದು ಗೌರವಿಸುವುದು. ಒಂದು ಅತ್ಯಂತ ಸಹಜ ಭಾವನೆಯಾಗಿದೆ. ಅಂತೆಯೇ ಸಂಸ್ಕೃತದ ಸುಭಾಷಿತವೊಂದು ಈ ರೀತಿಯಾಗಿದೆ.

"ಜನನೀ ಜನ್ಮ ಭೂಮಿಶ್ವ! ಸ್ವರ್ಗಾದಪಿ ಗರಿಯಸಿ!."[೨] ಎಂಬ ಸಂಸ್ಕೃತ ಸುಭಾಷಿತವೊಂದು ತಿಳಿಸುವಂತೆ ತಾಯಿ ಮತ್ತು ತಾಯಿ ನಾಡು ಸ್ವರ್ಗಕ್ಕಿಂತ ವೈಭವೋಪೇತವಾದವು.

ಈ ಭಾವನೆಯಿಂದ ಉತ್ಸಾಹಿತರಾದ ಖ್ಯಾತ ಕವಿಗಳು, ಪಂಡಿತರು, ತತ್ವಜ್ಞಾನಿಗಳು ರಾಜಕೀಯ ನೇತಾರರು ರಾಷ್ಟ್ರೀಯವಾದಿಗಳು, ಹುತ್ಮಾತ್ಮರು ಜನರಲ್ಲಿ ಸ್ವಾತಂತ್ರ್ಯ ಹಾಗೂ ಏಕೀಕರಣದ ಬಗ್ಗೆ ಜಾಗೃತಿ ಮೂಡಿಸಲು ರಾಷ್ಟ್ರೀಯತೆಯನ್ನು ಭೋದಿಸುವ ಹಾಗೂ ಪ್ರಚಾರ ಪಡಿಸುವ ಕೆಲಸ ಮಾಡಿದರು. ಇದರ ಪರಿಣಾಮವಾಗಿ ವಿದೇಶಿ ಸಂಕೋಲೆಯಲ್ಲಿ ಬದುಕುತ್ತಿದ್ದ ಜನರು ವಿದೇಶಿ ಆಳ್ವಿಕೆಯನ್ನು ಕಿತ್ತೊಗೆದು ವಿಮೋಚನೆಗಳಿಸಲು ಪ್ರಯತ್ನಪಡುವಂತಾಯಿತು. ಈ ದಿಶೆಯಲ್ಲಿ ನಿಜಾಮನ ಹೈದರಾಬಾದ ಸಂಸ್ಥಾನದಲ್ಲಿ ಜರುಗಿದ್ದ ಸ್ವಾತಂತ್ರ್ಯ ಸಂಗ್ರಾಮವು ತನ್ನದೇ ಆದ ದಾರಿ ತುಳಿದು ಕೊನೆಗೆ ಕ್ರಾಂತಿಯಾಗಿ ರೂಪುಗೊಂಡಿತು. ಹೈದರಾಬಾದ ಸಂಸ್ಥಾನದಲ್ಲಿ ಜನರು ಸಾಮೂಹಿಕವಾಗಿ ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧಮುಕಲು ಮತ್ತು ರಾಷ್ಟ್ರೀಯತೆ ಭಾವನೆ ಬೆಳೆಯಲು ಕಾರಣವಾದ ಅಂಶಗಳು ಕೆಳಕಂಡಂತಿವೆ.

**ಆರ್ಯಸಮಾಜ:**

ಹೈದರಾಬಾದ ವಿಮೋಚನಾ ಚಳುವಳಿಯಿಂದ ಆರ್ಯಸಮಾಜದ ಹೋರಾಟವನ್ನು ಹೊರತು ಪಡಿಸಿದರೆ ಅಲ್ಲಿ ಏನೂ ಉಳಿಯುವುದಿಲ್ಲ ಎನ್ನವಷ್ಟರ ಮಟ್ಟಿಗೆ ಆರ್ಯ ಸಮಾಜವು ಈ ವಿಮೋಚನೆಗಾಗಿ ದುಡಿದಿದೆ. ಅದರಂತೆ ಈ ವಿಮೋಚನೆಗಾಗಿ ಲೆಕ್ಕವಿಲ್ಲದಷ್ಟು ಬಲಿದಾನಗಳನ್ನು ಮಾಡಿದೆ. ಆರ್ಯ ಸಮಾಜವು ಒಂದು ಮತೀಯ ಸಂಘಟನೆಯೆಂದು, ಹಣೆಪಟ್ಟಿಹೊತ್ತಿದ್ದರೂ ರಜಾಕಾರರ ಹಾಗೆ ಯಾವತ್ತೂ ಮತಾಂತರಕ್ಕಾಗಿ ಬಲವಂತ ಮಾಡಿಲ್ಲ. ಕ್ರಿಶ್ಚನ ಮಿಷನರಿಗಳ ಹಾಗೆ ಆಮಿಷವೊಡ್ಡಿ ಮತಾಂತರ ಮಾಡಿಸಿಲ್ಲ. ಆದರೆ ತನ್ನ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ತನ್ನ ಸಿದ್ಧಾಂತಗಳು ಟೀಕೆಗೆ ಗುರಿಯಾದಾಗ, ಕೋಮುದಳ್ಳುರಿ ತಾಂಡವವಾಡುತ್ತಿದ್ದಾಗ ಅದು ಮೂಕ ಪ್ರೇಕ್ಷಕನಂತೆ ಕೈಕಟ್ಟಿಕೊಂಡು ಕೂಡಲಿಲ್ಲ. ಹರಿತವಾದ ತರ್ಕಗಳಿಂದ, ಧಾರಾ ಪ್ರವಾಹದ ಮಾತುಗಾರಿಕೆಯಿಂದ ತನ್ನ ನಿಲುವನ್ನ ಸಮರ್ಥಿಸಿಕೊಂಡಿದೆ. ಇದು ಆರ್ಯ ಸಮಾಜದ ಚರಿತ್ರೆಯಾಗಿದೆ.

**ಚಳುವಳಿ:**

೧೮೨೪ರಲ್ಲಿ ಅಂಬಶಂಕರ ತೀವಾರಿ ಮತ್ತು ಅಮೃತಬಾಣ ಅಥವಾ ೧೮೫೭ ಎಪ್ರೀಲ್ ೧೦. ೧೮೫೭ರಲ್ಲಿ ಸ್ವಾಮಿ ದಯಾನಂದ ಸರಸ್ವತಿಯವರಿಂದ ಪ್ರಾರಂಭಿಸಲ್ಪಟ್ಟ ಆರ್ಯಸಮಾಜ ನಿಜಾಮನ ಅದಿಪತ್ಯದಲ್ಲಿ ಧರ್ಮದ ಪತಾಕೆ ಹಿಡಿದು ಸಾಮಾಜಿಕ, ರಾಜಕೀಯ ಪುನರುತ್ಥಾನವನ್ನು ಸಂಘಟಿಸಿದ ಚಳುವಳಿಯಲ್ಲಿ ಚಾಲಕ ಶಕ್ತಿಯಾಗಿ ಕಾರ್ಯ ನಿರ್ವಹಿಸಿತು. ಹೈದರಾಬಾದ ಸಂಸ್ಥಾನದಲ್ಲಿ ಅದು ಗಳಿಸಿಕೊಂಡಷ್ಟು ಮಾನ್ಯತೆಯನ್ನು ಭಾರತದ ಉಳಿದ ಕಡೆ ಘಳಿಸಿಕೊಂಡಿರಲಿಲ್ಲ. ಬಹು ಸಂಖ್ಯಾತ ಹಿಂದುಗಳ ಮೇಲೆ ಅಲ್ಪ ಸಂಖ್ಯಾತ ಮುಸ್ಲಿಂರವರ ಆಡಳಿತವನ್ನು ಹೇರಿಸಿದ್ದ ಹೈದರಾಬಾದ ಸಂಸ್ಥಾನದಲ್ಲಿ ಬಹುಮುಖ್ಯ ರಾಜಕಿಯ ಸಮಸ್ಯೆ ಆಡಳಿತ ವರ್ಗವು ಅನುಸರಿಸುತ್ತಿದ್ದ ಮುಸ್ಲಿಮೇತರರ ಮತಾಂತರ, ದಟ್ಟವಾದ ದಾರಿದ್ರ್ಯ, ಅನಕ್ಷರತೆ ಹಾಗೂ ಅಭದ್ರತೆಯ ಸ್ಥಿತಿಯಲ್ಲಿ ಹಿಂದುಗಳ ಮನಸ್ಸಿಗೆ ಅಘಾತವನ್ನುಂಟು ಮಾಡಿತ್ತು. ಶೋಷಣೆ ಹಾಗೂ ಬಲವಂತದ ಮೂಲಕ ಜವಾಬ್ದಾರಿ ಪ್ರಾತಿನಿಧಿಕ ಸರಕಾರವನ್ನು ಒತ್ತಾಯಿಸುತ್ತಿದ್ದ ಚಳುವಳಿಯಲ್ಲಿ ಭಾಗವಹಿಸುತ್ತಿದ್ದ ಮುಸ್ಲಿಂಮೇತರರ ಸಂಖ್ಯೆಯನ್ನು ಕಡಿಮೆ ಮಾಡಲು ನಿಜಾಮನು ದೃಢ ನಿಶ್ಚಯ ಮಾಡಿದ್ದನು.

ಈ ದಿಶೆಯಲ್ಲಿ ದಿನಾಂಕ ೧೯೪೯ ಫಸಲಿಯಲ್ಲಿ (ಕ್ರಿಶ ೧೯೩೦) ಒಂದು ಫರ್ಮಾನು ಹೊರಡಿಸಿ ನಿಜಾಮನು ಮೈಫೊಸ ಮತ್ತು “ಗಯಾರ್‌ಮೈಫೊಸ ’”.೩ ಎಂಬ ಶಾಸನಗಳನ್ನು ಜಾರಿಗೊಳಿಸಿದನು. ಮೊದಲನೆಯ ಶಾಸನ ಮುಸ್ಲಿಂಮರ ಆಸ್ತಿ ದಿಕ್ಕುಗಳ ರಕ್ಷಣೆಗೆ ವಿಶೇಷ ಅಧಿಕಾರವನ್ನು ಮತ್ತು ಮತಾಂತರ ಹೊಂದಿದ ಹಿಂದು ಧರ್ಮದ ದಲಿತವರ್ಗಕ್ಕೂ ಈ ವಿಶೇಷ –

–ಅಧಿಕಾರಗಳನ್ನು ವಿಸ್ತರಿಸುವುದರ ಮೂಲಕ ನಿಜಾಮನ ಉದ್ದೇಶಕ್ಕೂ ಅವರೆಲ್ಲಾ ಬೆಂಬಲ ಕೊಡುವಂತೆ ಪ್ರಯತ್ನಿಸಲಾಯಿತು. ಈ ಶಾಸನ ಮುಸ್ಲಿಂಮರಿಗೆ ಹಿಂದೂಗಳ ಜಮೀನನ್ನು ಖರೀದಿಸಲು ಅನುಮತಿ ನೀಡಿತು. ಆದರೆ ಎರಡನೇಯ ಶಾಸನದ ಪ್ರಕಾರ ಹಿಂದುಗಳು ಮುಸ್ಲಿಂಮರು ಜಮೀನನ್ನು ಖರೀದಿಸುವ ಹಾಗೂ ಸಾಲದ ಮೇಲೆ ಒತ್ತೆ ಇಟ್ಟು ಮುಸ್ಲಿಂಮರು ಭೂಮಿಯನ್ನು ವಶಪಡಿಸಿಕೊಳ್ಳುವ ಹಕ್ಕನ್ನು ಕಳೆದುಕೊಂಡರು. ಹೀಗೆ ರಾಜಕೀಯವನ್ನು ಧರ್ಮದಲ್ಲಿ ತಳುಕು ಹಾಕಿ ಹಿಂದುಗಳ ಸಿವಿಲ ಮತ್ತು ಧಾರ್ಮಿಕ ಹಕ್ಕುಗಳನ್ನು ಮೊಟಕುಗೊಳಿಸಿದನು.

ನಿಜಾಮನು ಈ ವಿವಿಧ ನೀತಿಯು ಹಿಂದೂಗಳನ್ನು ರೊಚ್ಚಿಗೆಬ್ಬಿಸಿತು ಆರ್ಯಸಮಾಜವು ಇದನ್ನೇಲ್ಲಾ ನೊಡಿಕೊಂಡು ಮೌನವಾಗಿರಲು ಸಾಧ್ಯವಾಗಲಿಲ್ಲ. ಹಿಂದುಗಳ ರಕ್ಷಣೆಗೆ ಆರ್ಯ ಸಮಾಜವು ಮುಂದಾಯಿತು ನಿಜಾಮನ ದಬ್ಬಾಳಿಕೆ ಹಾಗೂ ಮತಾಂತರ ನೀತಿಯ ವಿರುದ್ಧ ಹೋರಾಟ ಮಾಡಲು ಜನರಲ್ಲಿ ಜಾಗೃತಿ ಮೂಡಿಸುವ ಹಾಗೂ ಅವರನ್ನು ಸಂಘಟಿಸುವ ಕೆಲಸದಲ್ಲಿ ಆರ್ಯಸಮಾಜ ಮುಂದಾಯಿತು. ಹೈದರಾಬಾದಿನಲ್ಲಿ ಸ್ಥಾಪನೆಯಾಗಿದ್ದ ಆರ್ಯಸಮಾಜ ಪ್ರತಿನಿಧಿ ಸಭಾದ ನಿರ್ದೇಶನದಂತೆ ಪಂ.ಕೇಶವರಾವ್ ವಿನಾಯಕರಾವವಿದ್ಯಾಲಂಕಾರ ಪಂ. ರಾಮಚಂದ್ರ ಮತ್ತು ಪಂ. ನರೇಂದ್ರಜಿಲ್ಲ ಮುಂತಾದ ನಾಯಕರು ಹೈದರಾಬಾದ ಕರ್ನಾಟಕದ ಬೀದರ ತಾಲ್ಲೂಕಿನಾದ್ಯಂತ ಸಂಚಾರ ಮಾಡಿ ನಾಗರಿಕ ಮತ್ತು ಧಾರ್ಮಿಕ ಹಕ್ಕುಗಳ ರಕ್ಷಣೆಗಾಗಿ ಜನರನ್ನು ಸಂಘಟಿಸಲು ಪ್ರಾರಂಭಿಸದರು.

ಈ ಕಾರ್ಯದ ಅಂಗವಾಗಿ ಗುಲಬರ್ಗಾ, ಬೀದರ, ಯಲಬುರ್ಗಾ, ಉದಗೀರ್, ಇಟಗಿ, ಕುಕನೂರು, ಕೊಪ್ಪಳ, ಅಳವಂಡಿ, ರಾಯಚೂರು, ಯಾದಗೀರ್ "ಬೀದರ" ಮಹಾಗಾಂವ ಹಳ್ಳಿಖೇಡ ಹುಮನಾಬಾದ, ಬಸವಕಲ್ಯಾಣ, ಚಿಟಗುಪ್ಪಾ, ಭಾಲ್ಕಿ ಇನ್ನಿತರ ಸ್ಥಳಗಳಲ್ಲಿ ಹೈದರಾಬಾದ ಕರ್ನಾಟಕ ಪ್ರಾದೇಶದಾದ್ಯಂತೆ ಆರ್ಯ ಸಮಾಜದ ಮಂದಿರಗಳು ಕಛೇರಿಗಳು ಪ್ರಾರಂಭವಾದವು.

ಅಂತೇಯೇ "ಬೀದರ" ತಾಲ್ಲೂಕಿನಲ್ಲಿಯು ಕೂಡಾ ಆರ್ಯ ಸಮಾಜದ ಪ್ರಾದೇಶಿಕ ಕಛೇರಿಗಳು ಹಾಗೂ ಮಂದಿರಗಳು ಅಲ್ಲಿನ ನಾಯಕರುಗಳು ಪ್ರಯತ್ನದ ಫಲವಾಗಿ ಜನ್ಮ ತಾಳಿದವು. "ಬೀದರ" ತಾಲ್ಲೂಕಿನ ಧಿಮಂತ ಕೆಟ್ಟದೇಯ ಹೋರಾಟಗಾರರಾದ ನರೇಂದ್ರಜಿ, ಗುರುಪ್ಪ ಲಾಡಗೇರಿ, ಬ್ರಿಜಪಾಲಸಿಂಗ ಠಾಗೋರ, ಭೀಮಣ್ಣ ಮಜ್ಜಿಗೆ, ಅಪ್ಪಾರಾವ ಶೇಟಕಾರ ಮುಂತಾದ ಧೀರೋದಾತ್ತ ನಾಯಕರು, ಆರ್ಯ ಸಮಾಜದ ನೇತೃತ್ವ ವಹಿಸಿಕೊಂಡರು. ಇವು

೦೧) ಮಾನವ ಜನಾಂಗದ ಸಮಾನತೆ.

೦೨) ಜಾತಿ ಪದ್ಧತಿಯ ಖಂಡನೆ.

೦೩) ಶಿಕ್ಷಣ ಮತ್ತು ಸಂಸ್ಕಾರಗಳಲ್ಲಿ ಸರ್ವರಿಗೂ ಸಮಾನ ಅವಕಾಶ.

೦೪) ಸತ್ಯಾರ್ಥ ಪ್ರಕಾಶದ ಸಂದೇಶ "ವೇದಗಳಿಗೆ ಹಿಂತಿರುಗಿ".

೦೫) ಮಂತಾಧ ರಜಾಕಾರರ ದಮನ

೦೬) ಭಾರತೀಯರಿಗೆ ಭಾರತ. [೪]

ಮುಂತಾದ ತತ್ವಗಳ ಪ್ರಚಾರದ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಿದವು. ಆರ್ಯ ಸಮಾಜದ ಪ್ರಾದೇಶಿಕ ಕಛೇರಿ ಮತ್ತು ಮಂದಿರಗಳ ಪರಿಣಾಮಕಾರಿ ಸಂಚಲನದಿಂದ ಬೀದರ ತಾಲೂಕಿನಾದ್ಯಂತ ಜನರಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಮೊಳಕೆಯೊಡೆದು ಹೆಮ್ಮರವಾಗಿ ಬೆಳೆದು ಹೈದರಾಬಾದ ಕರ್ನಾಟಕ ವಿಮೋಚನೆ ಹಾಗೂ ಅಖಂಡ ಕರ್ನಾಟಕ ನಿರ್ಮಾಣಕ್ಕೆ ತನ್ನದೇಯಾದ ಕೊಡುಗೆಯನ್ನು ಸಲ್ಲಿಸಿತು. ಇವುಗಳಡಿಯಲ್ಲಿಯೇ "ಬೀದರ" ನಲ್ಲಿ "ಓಂ".[೫] ಲಾಂಛನ ಹೊತ್ತು ಧ್ವಜವನ್ನು ಹಾರಿಸಿಸುದರ ಮೂಲಕ ಹಾಗೂ ಹವನ ಕಂಡವನ್ನು ಏರ್ಪಡಿಸುವುದರ ಮೂಲಕ ನಿಜಾಮ ಸರ್ಕಾರದ ಪ್ರತಿಬಂಧಕಾಜ್ಞೆ ೧೪೪ ಕಾನೂನು ಉಲ್ಲಂಘನೆ ಮಾಡಿದರು. ಅಲ್ಲದೆ ನಿಜಾಮ ಸಂಸ್ಥಾನದ ಸೈನ್ಯದ ವಿರುದ್ಧ ಮತ್ತು ಮುಂತಾದ ರಜಾಕಾರರ ವಿರುದ್ಧ ಎದೆಕೊಟ್ಟು ಹೋರಾಡಲು "ಜೈ ಹನುಮಾನ ವ್ಯಾಯೊಮ ಶಾಲೆ".[೬] ಗಳನ್ನು ಕಟ್ಟಿ ಯುವಕರಿಗೆ ಕಟ್ಟುವಸ್ತುವಾಗಿರಲು ಅವಕಾಶ ಮಾಡಿಕೊಡಲಾಯಿತು.

ಹಿಂದೂ ಧರ್ಮದ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವಂತೆ ಮಾಡಲು ಮತ್ತು ಜನರೆಲ್ಲಾ ಒಟ್ಟಿಗಿ ಇರುವಂತೆ ಮಾಡುವ ಸಲುವಾಗಿ ಲಿಂಗಾಯತರು, ಹರಿಜನರು ಹಾಗೂ ಬ್ರಾಹ್ಮಣರ ನಡುವೆ ಅಂತರಜಾತಿ ವಿವಾಹಗಳನ್ನು ಬೀದರನಲ್ಲಿ ಏರ್ಪಡಸಿದರು.

**ಬೀದರದಲ್ಲಿ ಜಗಳ ಹಾಗೂ ಲೂಟಿ:**

೧೯೪೦ ರಲ್ಲಿ ಬೀದರನಲ್ಲಿ ಸಂಪ್ರದಾಯಿಕ ದಂಗೆಯಾಯಿತು. ಮುಸಲ್ಮಾನರು ಬೀದರ ಗಂಜನ್ನ ಲೂಟಿಮಾಡಿ ಬೆಂಕಿಯಿಟ್ಟರು. ಲಕ್ಷಗಟ್ಟಲೆ ಹಾನಿಯಂಟಾಯಿತು. ಆದರೆ ಸರ್ಕಾರದ ಕರ್ಮಚಾರಿಗಳು ಆರ್ಯ ಸಮಾಜದವರ ಮೇಲೆ ಆರೋಪ ಹಾಕಿದರು. ಈ ಘಟನೆ ಕುರಿತು ಆರ್ಯ ಸಮಾಜದವರು ಆರ್ಯ ಪ್ರತಿನಿಧಿ ಸಭೆ ಹೈದ್ರಾಬಾದಿಗೆ ತೆಗೆದುಕೊಂಡು ಹೊದರು, ದಂಗೆಯ ಬಗ್ಗೆ ಶೋದನೆ ಮಾಡಿದಾಗ ಮುಸ್ಲಿಂರು ದೋಷಿಗಳೆಂದು ತೀರ್ಪುಕೊಡಲಾಯಿತು. ಆರ್ಯ ಸಮಾಜಿಗಳು ನಿರ್ದೋಷಿಗಳಾದರು.

ನಿಜಾಮ ಸರಕಾರವು ಆರ್ಯ ಸಮಾಜದ ಬೇಡಿಕೆಗಳ ಕಡೆ ಗಮನ ಹರಿಸದೆ ಇದ್ದಾಗ ೨೪ನೇ ಅಕ್ಟೋಬರ ೧೯೩೮ ರಂದು ನಿಜಾಮ ಸರಕಾರದ ವಿರುದ್ಧ ಸತ್ಯಗ್ರಹ ನಡೆಸಲು ಆರ್ಯ ಸಮಾಜ ನಿರ್ಧರಿಸಿತು.

## ಲೋಕಮಾನ್ಯ ತಿಲಕರ ಪ್ರಭಾವ

ಭಾರತ ದೇಶವು ಕಂಡ ಒಬ್ಬ ಮಹಾನ ವ್ಯಕ್ತಿ. ಭಾರತದ ರಾಷ್ಟ್ರೀಯ ಚಳುವಳಿಯ ಪಿತಾಮಹರೆನಿಸಿಕೊಂಡ ಅಹಿಂಸಾವಾದಿ ಮಹಾತ್ಮ ಗಾಂಧೀಜೀಯವರು ಕೂಡಾ ತಿಲಕರ ರಾಷ್ಟ್ರೀಯ ಚಳುವಳಿಯನ್ನು ಅನುವಾದಿಸಿರುವುದು ಇತಿಹಾಸದಿಂದ ಕಂಡುಬರುತ್ತದೆ. ಅಂತಹ ವ್ಯಕ್ತಿತ್ವದ ತಿಲಕರು ರಾಷ್ಟ್ರೀಯತೆಯ ದೀಕ್ಷೆತೊಟ್ಟ ರಾಷ್ಟ್ರೀಯವಾದಿಗಳಾಗಿದ್ದರು. "ಮಹಾರಾಷ್ಟ್ರದ ಅನಭಿಷಿಕ್ತದೊರೆ" ಭಾರತದ ರಾಜಕೀಯ ಅಶಾಂತಿಯ ಜನಕ ರೆಂದೆಲ್ಲಾ ಪ್ರಸಿದ್ಧಿ ಪಡೆದ ತಿಲಕರು ನೀಡಿದ ಮಂತ್ರ "ಸ್ವರಾಜ್ಯವು ನನ್ನ ಜನ್ಮಸಿದ್ದ ಹಕ್ಕು! ಅದನ್ನು ನಾನು ಪಡೆದೇ ತೀರುತ್ತೇನೆ".[೭] ಎಂಬುದು ಹೈದರಾಬಾದ ಕರ್ನಾಟಕ ಪ್ರದೇಶದ ಉತ್ಸಾಹಿ ಯುವಕರ ಮೇಲೆ ತೀವ್ರ ರೀತಿಯಲ್ಲಿ ಪ್ರಭಾವ ಬೀರಿತು.

ಗುಲಬರ್ಗಾ, ಬೀದರ, ಚಿಂಚೋಳಿ, ಕುಕನೂರ, ರಂಗಪೇಟ, ಆಳಂದ, ರಾಯಚೂರು, ಸುರಪೂರ, ಹುಮನಾಬಾದ ಮುಂತಾದವುಗಳ ಕಡೆ ೧೯೩೫ ರಿಂದ ೧೯೪೫ರ ವರೆಗೆ ನಡೆದ ಹಿಂದೂ – ಮುಸ್ಲಿಂ ಗಲಭೆ ಕಾಲದಲ್ಲಿ ಧಾರ್ಮಿಕ ಭಾವನೆಯನ್ನು ಮತ್ತು ಸ್ವಾಭಿಮಾನವನ್ನು ರಕ್ಷಿಸಿಕೊಳ್ಳಲು ಕನ್ನಡಿಗರಿಗೆ ಇದ್ದ ಮಾರ್ಗವೆಂದರೆ ತಿಲಕರ ಈ ಬೋಧನೆಯಾಗಿತ್ತು. ನಿಜಾಮನ ಅಧಿಕಾರಿಗಳಿಂದ ಹಾಗೂ ರಜಾಕಾರರ ಅತ್ಯಾಚಾರದಿಂದ ಉಂಟಾದ ಅವಮಾನ ಅನ್ಯಾಯಗಳ ವಿರುದ್ಧ ಹೈದರಾಬಾದ ಕರ್ನಾಟಕ ಉತ್ಸಾಹಿ ಯುವಕರು ತಿಲಕರ ಸ್ವದೇಶಿ ಚಳುವಳಿಯ ನಾಲ್ಕು ಕಾರ್ಯಕರ್ಮಗಳನ್ನು ತಮ್ಮ ಪ್ರದೇಶಗಳಲ್ಲಿ ಕಾರ್ಯಗತಗೊಳಿಸತೊಡಗಿದರು. ತಿಲಕರ ವ್ಯಕ್ತಿತ್ವದಿಂದ ಪ್ರಭಾವಿತರಾದ ಬೀದರ ಜಿಲ್ಲಾ ರಾಷ್ಟ್ರೀಯವಾದಿಗಳು ಹಾಗೂ ಬೀದರ ತಾಲೂಕಿನ ರಾಷ್ಟ್ರೀಯ ಹೋರಾಟಗಾರರಾದ ಅಪಾರಿಟಶೆಟಕಾರ. ಬ್ರಿಜ್‌ಪಲಸಿಂಗ ಠಾಕೋರ. ಮಾಣಿಕರಾವ ಚೌಧರಿ, ವಿಶ್ವನಾಥರಾವ ಚಳಪಳ್ಳಿಕರ ಶ್ರೀನಿವಾಸರಾವ ಎಖೆಳ್ಳಿಕರ, ಶ್ರೀನಿವಾಸರಾವ ಹವಾಲ್ದಾರ, ಹಲವಾರು ನಾಯಕರುಗಳ ನೇತೃತ್ವದಲ್ಲಿ ಬೀದರನಲ್ಲಿ.

ಎ) ಸ್ವದೇಶಿ

ಬಿ) ಬಹಿಷ್ಕಾರ

ಸಿ) ರಾಷ್ಟ್ರೀಯ ಶಿಕ್ಷಣ

ಡಿ) ಸ್ವರಾಜ್ಯದ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಿದರು.

ಹಿಂದೂಗಳಲ್ಲಿ ಹೋರಾಟದ ಮನೋಭಾವವನ್ನು ಬೆಳೆಸುವ ಸಲುವಾಗಿ ಅವರು ಗಣಪತಿ. ಶಿವಾಜಿ, ದಸರಾ, ಮುಂತಾದ ಹಬ್ಬಗಳನ್ನು ಸಂಘಟಿಸತೊಡಗಿದರು. ಇದರಿಂದ ಸಾಮಾನ್ಯ ಜನರು ಒಂದೆಡೆ ಕೂಡಿ ಸಂಘಟಿತರಾಗಲು ಅವಕಾಶವಾಯಿತು ೧೮೯೫ರ ಪುಣೆಯಲ್ಲಿ ಜರುಗಿದ ಶಿವಾಜಿ ಉತ್ಸವದಲ್ಲಿ ತಿಲಕರು ನೀಡಿದ ಭಾಷಣವು ಉಲ್ಲೇಖನಾರ್ಹವಾಗಿದೆ.

"ಪರಕೀಯರ ಆಳ್ವಿಕೆಯಿಂದ ದೇಶವನ್ನು ಪಾರುಮಾಡುವದತ್ತು ದೇಶದ ಪ್ರಾಚೀನ ವೈಭವವನ್ನು ಪುನರಸ್ಥಾಪಿಸುವುದು ಕೇವಲ ಸ್ವರಾಜ್ಯದಿಂದ ಮಾತ್ರ ಸಾದ್ಯ. ಅಫಜಲ್‌ಖಾನನನ್ನು ಶಿವಾಜಿಯು ದೇಶದ ಸ್ವಾತಂತ್ರ್ಯ ಸಾಧಿಸುವ ಉದ್ದೇಶದಿಂದ ಮಾಡಿದ ಹತ್ಯೆಯು ದೇಶ ಪ್ರೇಮದ ಕಾರ್ಯವಾಗಿದೆ".೮

ಇಂತಹ ಅನೇಕ ತಿಲಕರ ಉತ್ಸಾವಗಳಿಗೆ ಹೈದರಾಬಾದ ಕರ್ನಾಟಕದ ಏಕೀಕರಣದ ಅನುಯಾಯಿಗಳಾದ ಸ್ವಾಮಿ ರಮಾನಂದ ತೀರ್ಥರು, ಜಗನ್ನಾಥರಾವ ಚಂದ್ರಿಕೆ, ಪ್ರಭುರಾವ ಕಾಂಬ್ಳೆವಾಲೆ. ಕೊಲ್ಲೂರು ಮಲ್ಲಪ್ಪ. ಜಿ.ಜಿ.ದೇಶಪಾಂಡೆ. ಕಪಟ್ರಾಳ ಕೃಷ್ಣರಾವ. ವಿ.ಪಿ.ದೇವಳಗಾಂವಕರ್ ಮುಂತಾದವರು. ಬಿಜಾಪೂರು, ಪುಣೆ, ಬೊಂಬಾಯಿ, ಸೊಲ್ಲಾಪುರಗಳಲ್ಲಿ ನಡೆದ ಬೋಧನೆಯ ತರಬೇತಿ ಶಿಬಿರಗಳಲ್ಲಿ ಭಾಗವಹಿಸಿದರು. ಸ್ವರಾಜ್ಯ ಪಡೆಯುವುದು ಅವರ ಜೀವನದ ಪರಮ ಗುರಿಯಾಗಿತ್ತು. ಆದ್ದರಿಂದಲ್ಲೇ ಪೂರ್ಣ ಸ್ವರಾಜ್ಯದ ಬೇಡಿಕೆಯನ್ನಿಟ್ಟರು.

"ಸ್ವರಾಜ್ಯವಾಗಲಿ ಅಥವಾ ರಾಜಕೀಯ ಹಕ್ಕುಗಳಾಗಲಿ ಬೇಡಿದರೆ ದೊರಕುವುದಿಲ್ಲ ಅವುಗಳಿಗಾಗಿ ಹೋರಾಡಬೇಕು. ಎಂದು ಕರೆ ನೀಡಿದರು. ಅಲ್ಲಿದ ಹೈದರಾಬಾದ ಸಂಸ್ಥಾನದಡಿ ಬೀದರ ತಾಲ್ಲೂಕಿನ ಸಾವಿರಾರು ತಿಲಕರ ಅನುಯಾಯಿಗಳಿಗೆ ಅವರು ನೀಡಿದ ಮತ್ತೊಂದು ಹೇಳಿಕೆ ಅದ್ಭೂತ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

"ಕಪ್ಪೆಗಳಂತೆ ವರ್ಷಕ್ಕೊಂದು ಬಾರಿ ವಟಗುಟ್ಟಿದರೆ ಏನನ್ನು ಸಾಧನೆ ಮಾಡಲು ಸಾದ್ಯವಿಲ್ಲ, ಬದಲಾಗಿ ಸ್ವರಾಜ್ಯ ಪಡೆಯಲು ನಿರಂತರವಾಗಿ ಸಾಂಘಿಕ ಹೋರಾಟ ಅತಿ ಅವಶ್ಯಕ". ೯

"ಮನೆಗೆ ಕಳ್ಳರು ನುಗ್ಗಿದಾಗ ಅವರನ್ನು ಮನೆಯಿಂದ ಹೊಡೆದೋಡಿಸಲು ನಮ್ಮಲ್ಲಿ ಶಕ್ತಿ ಇಲ್ಲದಿದ್ದರೆ ಅಂಥಮನೆಯ ಬಾಗಿಲು ಹಾಕಿ ಅವುಗಳಿಗೆ ಬೆಂಕಿ ಹಚ್ಚಲು ನಾವು ಹಿಂಜರಿಯಬಾರದು".೧೦

ಇವರಿಂದ ಪ್ರೇರೆಪಿತರಾದ ಅಪ್ಪಾರಾವ ಶೆಟಕಾರ, ಕೆ.ಎಸ್.ರಾಜಮಾಸ್ತರ, ಮಹಾಂತಪ್ಪ ಮಡಕೆ, ಮಾಣಿಕರಾವ ಪುಲೆಕರ, ರಂಗನಾಥರಾವ ಸಾಯಗಾಂವಕರ ಮುಂತಾದವರು. ಬೀದರ ತಾಲೂಕಿನ ಸಮಗ್ರ ಹೋರಾಟಗಾರರಿಗೆ ತಿಲಕರ ವ್ಯಕ್ತಿತ್ವ ದರ್ಶನ ಮಾಡಿಸುವ ಜವಾಬ್ದಾರಿಯನ್ನು ಹೊತ್ತುಕೊಂಡರು.

ತಮ್ಮ ಪ್ರಚೋದನಾಕಾರಿ ಹೇಳಿಕೆಗಳು ಬೀದರ ತಾಲ್ಲೂಕಿನಡಿ ಹಿಂಸಾತ್ಮಕ ಹೋರಾಟಗಳಿಗೆ ಎಡೆ ಮಾಡಿಕೊಟ್ಟಿತ್ತು ಹಾಗೂ ರಾಷ್ಟ್ರೀಯ ಚಳುವಳಿ ಭಾರತಾಂಬೆಯ ಬಿಡುಗಡೆಯ ಜೊತೆಗೆ ನಿಜಾಮನ ಪಾಕಿಸ್ತಾನದ ಕನಸನ್ನು ನುಚ್ಚುನೂರುಮಾಡುವ ದಾರಿಯನ್ನು ತುಳಿಯಿತು. ಕೋಮುಶಕ್ತಿಗಳ ವಿರುದ್ಧ ಹೋರಾಡಲು ಹೈದರಾಬಾದ ಕರ್ನಾಟಕದ ಹಾಗೂ ಬೀದರ ತಾಲೂಕಿನ ಹೋರಾಟಗಾರರಿಗೆ ತಿಲಕರ ಈ ವಾಣಿಗಳು ದೇವವಾಣಿಯಾದವು.

**೩. ರಾಷ್ಟ್ರೀಯ ಶಾಲೆಗಳು**

ಹೈದರಾಬಾದ ಕರ್ನಾಟಕ ಪ್ರಾದೇಶಗಳಲ್ಲಿ ತಿಲಕರು ಮಹಾರಾಷ್ಟ್ರದಲ್ಲಿ ಪ್ರಾರಂಭಿಸಿದ ಸ್ವದೇಶಿ ಚಳುವಳಿಯು ರಾಷ್ಟ್ರೀಯ ಶಾಲೆಗಳ ಸ್ಥಾಪನೆಗಳ ಮೂಲಕ ವ್ಯಕ್ತವಾಯಿತು. ಈ ಭಾಗದ ಜನರು ಸ್ವಾತಂತ್ರ್ಯ ಸಂಗ್ರಾಮಕ್ಕೆ ಬೇಕಾದ ತಾತ್ವಿಕ ತಳಹದಿಯನ್ನು ಇವುಗಳ ಮೂಲಕ ದೊರಕಿಸಲಾಯಿತು. ನಿಜಾಮ ಸರ್ಕಾರದ ದಮನಕಾರಿ ಕ್ರಮಗಳನ್ನು, ಲೆಕ್ಕಿಸದೆ ರಾಷ್ಟ್ರೀಯವಾದಿಗಳು ವಿದೇಶಿ ಆಕ್ರಮಣ ಹಾಗೂ ಗುಲಾಮಿತನವನ್ನು ಪ್ರತಿಭಟಿಸಲು ಹಾಗೂ ಜನರಲ್ಲಿ ಸ್ವದೇಶಿ ವಿಚಾರವನ್ನು ಬಿತ್ತಲು ರಾಷ್ಟ್ರೀಯ ಶಾಲೆಗಳನ್ನು ಪ್ರಾರಂಭಿಸಿದರು.

ಕರ್ನಾಟಕದ ಕುಲಪುರೋಹಿತ ಆಲೂರ ವೆಂಕಟರಾಯರು ರಾಜ್ಯದಾಂತ ಪ್ರವಾಸ ಮಾಡಿ "ಸ್ವಾತಂತ್ರ್ಯ ಹಾಗೂ ಸ್ವಾವಲಂಬನೆಗಾಗಿ ರಾಷ್ಟ್ರೀಯ ಶಾಲೆಗಳ ಸ್ಥಾಪನೆ ಅವಶ್ಯಕ" ಎಂಬ ವಿಚಾರವನ್ನು ಮಂಡಿಸಿದರು. ಈ ರಾಷ್ಟ್ರೀಯ ಶಾಲೆಗಳು ಬೀದರ ತಾಲ್ಲೂಕಿನಲ್ಲಿ ಕಾಣಿಸದೇ ಇದ್ದರು ಅವುಗಳ ಪ್ರಭಾವ ತಾಲ್ಲುಕಿನ ಸ್ವಾತಂತ್ರ್ಯ ಹೋರಾಟಗಾರರು ಚಳುವಳಿಯಲ್ಲಿ ಧುಮುಕಲು ಪ್ರೇರಣೆ ನೀಡಿತು.

**೪ ಪಂಡಿತ ತಾರಾನಾಥರ ಪ್ರಭಾವ:**

ಕರ್ನಾಟಕದ ಕ್ರಾಂತಿಕಾರಿ ಪುರುಷ ಹೋರಾಟಗಾರರಲ್ಲಿ ಪಂ.ತಾರಾನಾಥರು ಒಬ್ಬ ಪ್ರಮುಖರಾಗಿದ್ದಾರೆ. ೧೮೯೧ರಲ್ಲಿ ಮಂಗಳೂರಿನಲ್ಲಿ ಜನಿಸಿದರು. ತಮ್ಮ ಜೀವಿತ ಕಾಲದಲ್ಲಿ ಅವರು ಒಂದು ಐತಿಹ್ಯರಾಗಿಬಿಟ್ಟಿದ್ದರು. ಧಾರ್ಮಿಕ, ಸಾಂಸ್ಕ್ರತಿಕ ಸಾಮಾಜಿಕವಾಗಿ ಕ್ರಾಂತಿಕಾರರಾಗಿ ಸ್ವಾಮೀ ವಿವೇಕಾನಂದರು ಭಾರತಕ್ಕೆ ಯಾವ ರೀತಿ ನವ ಚೈತನ್ಯ ತುಂಬಿದರೋ ಅದೇ ಕಾರ್ಯವನ್ನು ಪಂಡಿತ ತಾರಾನಾಥರು ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಸಮರ್ಪಕವಾಗಿ ಮಾಡಿದರು.

ಹದಿಮೂರು ಭಾಷೆಗಳಲ್ಲಿ ವಾಗ್ಮಿಯಾಗಿದ್ದ ಪಂ.ತಾರಾನಾಥರು ೧೯೧೨ ನಿಜಾಮ ಶಿಕ್ಷಣ ಇಲಾಖೆ ಸೇರಿ ಬೀದರನಲ್ಲಿ ಉಪಾದ್ಯಾಯರಾಗಿ ಕಾರ್ಯನಿರ್ವಹಿಸಿದರು. ಆದರೆ ನಿಜಾಮನ ಮಕ್ಕಳಿಗೆ ದರ್ಬಾರಿನಲ್ಲಿ ಪಾಠ ಹೇಳಿ ಕೊಡುವ ಆಹ್ವಾನ ಬಂದಾಗ ಅವನ ದೌರ್ಜನ್ಯಕ್ಕೆ –

– ತಲೆಬಾಗಿದಂತಾಗುತ್ತದೆ ಎಂದು ಅಹ್ವಾನವನ್ನು ದಿಕ್ಕರಿಸಿದರು. ೧೯೬೧ರಲ್ಲಿ ಅವನ ಅವಕೃಪೆಗೆ ಒಳಗಾಗಿದ್ದರಿಂದ, ಅವರನ್ನು ರಾಯಚೂರಿಗೆ ವರ್ಗಾಯಿಸಲಾಯಿತು. ಕಾರಣ ಪಂ.ತಾರಾನಾಥರು ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ನೀಡಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ಪಂಡಿತರು ಕೇವಲ ಸ್ವಾತಂತ್ರ್ಯ ಹೋರಾಟಗಾರ ರಷ್ಟೇ ಅಲ್ಲದೇ ಹೈದರಾಬಾದ ಸಂಸ್ಥಾನದಾದ್ಯಂತೆ ಸಾಮಾಜಿಕ ಧಾರ್ಮಿಕ ಸುಧಾರಣೆಗಳ ಕಡೆ ಕೂಡಾ ಗಮನ ಹರಿಸಿದರು. ಅದರ ಫಲವಾಗಿ ೧೯೨೨-೨೩ರಲ್ಲಿ ಕಾಲರಾಪ್ಲೇಗ ಮಾರಕ ರೋಗಗಳು ಹರಡಿದಾಗ ರಾಯಚೂರಿನಲ್ಲಿ ಸಾರ್ವಜನಿಕ ಆಸ್ಪತ್ರೆ ಪ್ರಾರಂಭಿಸಿದರು.

ಹಿಂದೂ-ಮುಸ್ಲಿಂರನ್ನು ಒಂದುಗೂಡಿಸಿ ಅಸ್ಪೃಶ್ಯತೆ, ಮೂಢನಂಬಿಕೆ ಹಾಗೂ ಜಾತೀಯತೆ ವಿರುದ್ಧ ಹೋರಾಟ ಮಾಡುವಂತೆ ಪ್ರೇರೇಪಿಸಿದರು. ಇವುಗಳೆಲ್ಲವನ್ನು ಗಮನಿಸುತ್ತಿದ್ದ. ಬೀದರ ತಾಲೂಕಿನ ಹೋರಾಟಗಾರರು, ಪಂ.ತಾರಾನಾಥರ ದಿ.ಹಿಂದು ಮತ್ತು ಅವರೇ ನಡೆಸುತ್ತಿದ್ದ "ಪ್ರೇಮ' ಪತ್ರಿಕೆಗಳಲ್ಲಿನ" ಯುಗದ ಕರ್ತವ್ಯ ಧಾರ್ಮಿಕ ಸ್ವಾತಂತ್ರ್ಯ ಭಾತರದ ಡಯ್ಯರ್ ನಿಜಾಮ ಮುಂತಾದ ಲೇಖನಗಳನ್ನು ಬೀದರ (ಹೈಸ್ಕೂಲ)ನಲ್ಲಿ ಅವುಗಳ ಕುರಿತು ತಿಳುವಳಿಕೆ ಮೂಡಿಸಿದರು. ಪಂ.ತಾರಾನಾಥರು ಹಿಂದಿ ಭಾಷೆಯಲ್ಲಿ ಬರೆದ 'ಧೀನ ಬಂಧು ಕಬೀರ' "ಇನ್ಸಾಫಿ" ಮೋಹನಾಸ್ತ್ರ ಎಂಬ ನಾಟಕಗಳು ನಿಜಾಮ ಸಂಸ್ಥಾನದ ವಿರುದ್ಧ ಬೀದರನ ಸಾರ್ವಜನಿಕರು ದಂಗೆಯೇಳುವಂತೆ ಪ್ರಚೋದಿಸಿದವು.

**೫ ಹರ್ಡೇಕರ ಮಂಜಪ್ಪನವರ ತತ್ವಜ್ಞಾನ**

"ಕರ್ನಾಟಕದ ಗಾಂಧಿ" ಎಂಬ ಬಿರುದಾಂಕಿತ ಹರ್ಡೇಕರ ಮಂಜಪ್ಪನವರ ವಿಚಾರಗಳಿಂದ, ತತ್ವಜ್ಞಾನದಿಂದ ಈ ಭಾಗದ ಜನರು ತೀವ್ರ ರೀತಿಯಲ್ಲಿ ಪ್ರಭಾವಿತಗೊಂಡಿದ್ದರು. ನಿಜಾಮ ಸಂಸ್ಥಾನದ ವೀರಶೈವ ಪರಿಷತ್ತು ಬೀದರ, ಗುಲಬರ್ಗಾ ರಾಯಚೂರು, ಉದಗೀರ್ ಇನ್ನಿತರ ಕಡೆ ಸಂಘಟಿಸುತ್ತಿದ್ದ ಕಾರ್ಯಕ್ರಮಗಳಿಗೆ ತಪ್ಪದೇ ಹಾಜರಾಗುತ್ತಿದ್ದರು.

ಹರ್ಡೇಕರ ಮಂಜಪ್ಪನವರು ತಿಲಕರ 'ಕೇಸರಿ' ಮತ್ತು ಆರ್ಯ ಸಮಾಜ 'ಸತ್ಯಾರ್ಥ ಪ್ರಕಾಶಗಳನ್ನು ಕನ್ನಡಕ್ಕೆ ಅನುವಾದ ಮಾಡಿ ಹೈ.ಸಂಸ್ಥಾನದ ಜನತೆಯಲ್ಲಿ ರಾಜಕೀಯ, ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಿದರು ಗಾಂಧೀಜಿಯವರು ವರ್ಣಾಶಮ ಕುರಿತು ವಿಚಾರಗಳನ್ನು ವಿರೋಧಿಸಿದ್ದ ಹರ್ಡೇಕರ ಮಂಜಪ್ಪನವರು ತಾವು ಇಸ್ಲಾಮನ್ನು ಏಕೆ ವಿರೋಧಿಸುತ್ತೇನೆ ಎಂಬುದನ್ನು ಸ್ಪಷ್ಟಪಡಿಸುತ್ತಿದ್ದರು.

ನಿಜಾಮ ಸಂಸ್ಥಾನದ ವೀರಶೈವ ಪರಿಷತನ ಒಂದು ಸಮಾರಂಭದಲ್ಲಿ ೧೯೩೮ರಲ್ಲಿ ಮುಖ್ಯ ಅತಿಥಿಗಳಾಗಿ ಮಾತನಾಡುತ್ತಾ "ರಾಷ್ಟ್ರದ ಏಕತೆ, ಸಾಮಗ್ರತೆ ಮತ್ತು ಸರ್ವತೋಮುಖ ಅಭಿವೃದ್ಧಿ ಸ್ವದೇಶಿ ಆಡಳಿತದಿಂದ ಮಾತ್ರ ಸಾಧ್ಯವೆಂದು ಅವರು ಒತ್ತಿ ಹೇಳಿದರು. ತಮ್ಮ ಧರ್ಮದ ಹಿತಾಸಕ್ತಿ ಹಾಗೂ ಸ್ವರಾಜ್ಯಗಳನ್ನು ಸಂರಕ್ಷಿಸಿಕೊಳ್ಳುವ ಸಲುವಾಗಿ ಚಿಂತಿಸಲು ಪ್ರಾರಂಭಿಸಿದ್ದು ತಾರ್ಕಿಕವಾದದ್ದು ಕೋಮುಶಕ್ತಿ".[೧೧] ಹರ್ಡೇಕರ ಮಂಜಪ್ಪನವರ ಈ ಸಂದೇಶವು ನಿಜಾಮ ಸಂಸ್ಥಾನದ ಕೋಮುಶಕ್ತಿ ವಿರುದ್ಧ ನಿರ್ಣಾಯಕ ಹೋರಾಟ ಮಾಡುವಂತೆ ನೀಡಿದ ದೈವವಾಣಿಯಾಗಿ ಬಿಟ್ಟಿತು.

ಸ್ವಾತಂತ್ರ್ಯ ಹೋರಾಟದ ಜೊತೆಗೆ ತಾವೊಬ್ಬ ಪ್ರಬುದ್ಧ ಪತ್ರಕರ್ತರಾಗಿ ಕನ್ನಡದಲ್ಲಿ 'ಧರ್ನದರ್ಾರಿ' ಸ್ವದೇಶಾಭಿಮಾನಿ ಖಾದಿ ವಿಜಯ ಉದ್ಯೋಗ ಮತ್ತು ಶರಣ ಸಂದೇಶ ಎಂಬ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರು. ಇವುಗಳ ಮೂಲಕ ಪರಕೀಯರ ಆಳ್ವಿಕೆಯ ವಿರುದ್ಧ ಹೋರಾಡುವಂತೆ ಮಾನವ ಹಕ್ಕುಗಳ ರಕ್ಷಣೆಗಾಗಿ, ಜಾಗೃತರಾಗುವಂತೆ ಕರೆ ನೀಡಿದರು. ಮಂಜಪ್ಪನವರ ಪತ್ರಿಕೆಗಳು ಹೈದರಾಬಾದ ಸಂಸ್ಥಾನದಾದ್ಯಂತ ಸ್ಥಾಪನೆಯಾಗಿದ್ದ ಗ್ರಂಥಾಲಯಗಳಿಗೆ ರವಾನೆಯಾಗುತ್ತಿದ್ದವು. ಅಂತೆಯೇ ಬೀದರ (ಹೈಸ್ಕೂಲ) ಈ ಪತ್ರಿಕೆಗಳು ಬರುತ್ತಿದ್ದು, ಜನತೆ ಅವುಗಳನ್ನು ಓದುವುದರ ಮೂಲಕ ಬೀದರ ತಾಲ್ಲೂಕಿನಲ್ಲಿ ರಾಷ್ಟ್ರೀಯ ಚಳುವಳಿಯನ್ನು ತಿವ್ರಗೊಳಿಸಿದರು.

### ಸ್ವಾಮಿ ರಮಾನಂದ ತೀರ್ಥರು:

ಸ್ವಾಮಿ ರಮಾನಂದ ತೀರ್ಥರು ಮಹಾತ್ಮಗಾಂಧೀಜೀಯವರ ಮಾರ್ಗದರ್ಶನದಲ್ಲಿ ಹೈ.ಸಂಸ್ಥಾನವನ್ನು ನಿಜಾಮನ ಕಪಿಮುಷ್ಠಿಯಿಂದ ಬಿಡಿಸಿದ ಧೀಮಂತ ಸ್ವಾತಂತ್ರ್ಯ ಹೋರಾಟಗಾರರು ಒಬ್ಬರು. ವೆಂಕಟೇಶ ಎಂಬುದು ಸ್ವಾಮಿ ರಮಾನಂದ ತೀರ್ಥರ ಮೊದಲ ಹೆಸರು. ೧೯೦೩ ಅಕ್ಟೋಬರ ೩ ರಂದು ವಿಜಾಪುರ ಜಿಲ್ಲೇಯ ಸಿಂದಗಿಯಲ್ಲಿ ಜನ್ಮತಾಳಿದರು.

ಅವರಿಗೆ ಹದಿವಯಸ್ಸಿನಲ್ಲಿ ಮಹಾತ್ಮಗಾಂಧೀ ಮತ್ತು ಲೋಕ ಮಾನ್ಯ ತಿಲಕರ ಸಂಪರ್ಕ ಬಂದಿತ್ತು. ಗಾಂಧೀಜೀಯವರು "ದೇಶ ಕೇಲಿಯೇ ಕುಚ್ಛ ಕರೋ."[೧೨] ಎಂಬ ಆದೇಶ ನೀಡಿದರು. ಅದನ್ನೆ ಗುರು ಮಂತ್ರವೆಂದು ಪರಿಗಣಿಸಿ ದೇಶಕ್ಕಾಗಿ ದುಡಿಯುವುದೇ ತನ್ನ ಜೀವನದ ಪರಮಗುರಿ ಎಂದು ದೃಢ ಸಂಕಲ್ಪಮಾಡಿ ಸನ್ಯಾಸ ಸ್ವೀಕರಿಸಿದರು. ಮೊದಲು ಶಿಕ್ಷಕ ವೃತ್ತಿಯನ್ನು ಕಟ್ಟಿಕೊಂಡು ಆಮೇಲೆ ಹೈದರಾಬಾದ ವಿಮೋಚನಾ ಚಳುವಳಿಗೆ ಇಳಿದು ರಾಜ್ಯದ ಉದ್ದಗಲಕ್ಕೂ ಸಂಚರಿಸಿ ಜನ ಜಾಗೃತಿಯನ್ನುಂಟು ಮಾಡಿದರು. ಹೈದರಾಬಾದ ಸ್ಟೇಟ ಕಾಂಗ್ರೇಸ ಹುಟ್ಟಿಗೆ ಸ್ವಾಮಿಗಳೇ ಕಾರಣಕರ್ತರಾದರು.

ಭಾತರದ ರಾಷ್ಟ್ರೀಯ ಚಳುವಳಿಗೆ ಮಹಾತ್ಮಗಾಂಧೀಜೀಯವರು ಹೇಗೋ ಹಾಗೇ ಹೈದರಾಬಾದ ಕರ್ನಾಟಕದ ರಾಷ್ಟ್ರೀಯ ಚಳುವಳಿಗೆ ಸ್ವಾಮೀ ರಮಾನಂದತೀರ್ಥರು ನಾಯಕ ರಾಜಕಾರಣ ಮತ್ತು ಅಧ್ಯಾತ್ಮಿಕತೆಗಳ ಸಂಗಮವಾಗಿದ್ದ ಸ್ವಾಮೀಜಿ ಹೈದರಾಬಾದ ಕರ್ನಾಟಕ ಸಂಸ್ಥಾನವನ್ನು ಭಾರತದಲ್ಲಿ ವಿಲೀನಗೊಳಿಸುವ ಹೋರಾಟದಲ್ಲಿ ನಾಯಕನ ಪಾತ್ರವಹಿಸಿದರು. ನಿಜವಾದ ಸನ್ಯಾಸಿಗಳಂತೆ ಬದಕು ಸಾಗಿಸುತ್ತಾ ತಿಲಕರ ಅಭಿಮಾನಿಗಳಾಗಿ ನಿಜಾಮ ಸರಕಾರದ ವಿರುದ್ಧ ಹೋರಾಟಲು ಜನಾಂದೋಲನವನ್ನು ಸಂಘಟಿಸಿದರು. ಅವರ ಪ್ರಗತಿಪರ ವಿಚಾರ ಮತ್ತು ದೃಢವಾದ ನಂಬಿಕೆಗಳಿಂದ ವಿದ್ಯಾರ್ಥಿ ಸಮುದಾಯವು ತುಂಬಾ ಪ್ರಭಾವಿತಗೊಂಡಿತು.

ಸ್ವಾತಂತ್ರ್ಯದ ಮಹತ್ವವನ್ನು ಪ್ರವಾಸ ಮಾಡುವಾಗ ರಜಾಕರರ ಮತ್ತು ನಿಜಾಮನ ವಿರುದ್ದ ಹೋರಾಡಲು ಒಂದು ಸಂಘಟನೆಯ ಅವಶ್ಯಕತೆಯನ್ನು ಮನಗಂಡರು. ೧೯೩೭ರಲ್ಲಿ ಹರಿಪುರದಲ್ಲಿ ನಡೆದ ಎಐಸಿಸಿ ಅಧಿವೇಶನದಲ್ಲಿ ದೊರಕಿತು. ಅದು ಸ್ಥಾಪನೆಯಾಗುವ ಮೊದಲೇ ನಿಜಾಮನು ಅದರ ಮೇಲೆ ನಿಷೇಧ ಹೇರಿದರು. ಕೂಡಾ ಸ್ವಾಮೀಜಿಯವರು ಅದನ್ನು ಹಿಂದಕ್ಕೆ ಪಡೆಯುವಂತೆ ೩೦-೧೦-೧೯೩೮ ರಂದು ಪ್ರಥಮ ಸರ್ವಾಧಿಕಾರಿಯಾಗಿ ಸತ್ಯಾಗ್ರಹ ಕೂತರು ಕಾರಣ ನಿಜಾಮನು ಅವರನ್ನು ಬಂಧಿಸಿದನು. ನಂತರ ಗಾಂಧೀಜೀಯವರ ಸೂಚನೆ ಮೇರೆಗೆ ಸತ್ಯಾಗ್ರಹ ಸಲ್ಲಿಸಿದಾಗ ಅವರನ್ನು ಬಿಡುಗಡೆ ಮಾಡಲಾಯಿತು.

ದಿನಾಂಕ ೧೧-೦೯-೧೯೪೦ ರ ಕಾಲಕ್ಕೆ ವ್ಯಕ್ತಿಗತ ಸತ್ಯಾಗ್ರಹ ನಡೆಸಲು ಗಾಂಧೀಜೀಯವರಿಂದ ಅನುಮತಿ ಪಡೆದರು. ಈ ಕಾಲಕ್ಕೆ ಬಂಧಿತರಾದ ಸ್ವಾಮೀಜೀ ನಿಜಾಮನ ಕೇಂದ್ರ ಕಾರಾಗ್ರಹದಲ್ಲಿ ೧೫ ತಿಂಗಳು ಬಂಧನದಲ್ಲಿದ್ದರು. ೧೯೪೨ ರಲ್ಲಿ ಸ್ಥಾನ ಬದ್ದತೆಗೆ ಒಳಗಾದರು.

ಹೈದರಾಬಾದ ಕರ್ನಾಟಕದ ಜನಾರ್ಧನರಾದ ದೇಸಾಯಿ. ವಿ.ಪಿ.ದೇವುಲಗಾಂವಕರ ಶಿರೂರು ವೀರಭದ್ರಪ್ಪಾ, ಗುರುಪ್ಪಾ ಲಾಡಗೇರಿ, ಅಪ್ಪಾರಾವ ಶೆಟಕಾರ, ಗ್ಯಾನರಾವ ಮುಂತಾದವರು ಸ್ವಾಮೀಜಿಯವರ ರಾಜಕೀಯ ಗರಡಿಯಲ್ಲಿ ತರಬೇತಿ ಪಡೆದವವರಾಗಿದ್ದಾರೆ. ಇವರಲ್ಲಿನ ಅಪ್ಪಾರಾವ ಶೇಟಕಾರ ಮತ್ತು ನಾನಾರಾವ ಕುಮಠೇಕರ ಬೀದರ ತಾಲೂಕಿನ ಮುಂಚೂಣಿಯಲ್ಲಿದ್ದರು. ಎಂಬುದವನ್ನು ಇಲ್ಲಿ ಗಮನಿಸಬೇಕಾದ ವಿಷಯವಾಗಿದೆ.

ಅದರಡಿಯಲ್ಲಿ ಬೆಳೆದ ನಾಯಕರು ಪ್ರಭಾವ ಬೀದರ ತಾಲೂಕಿನ ಪ್ರತಿ ಹಳ್ಳಿಗಳ ಮೇಲೆ ಮತ್ತು ಜನರ ಮೇಲಾಗಿತ್ತು. ಇವರೀರ್ವರ ಮಾರ್ಗದರ್ಶನದಲ್ಲಿ ಬೀದರನಾದ್ಯಂತ್ ಸ್ವಾಮಿಜಿಯವರಿಗೆ ಬೆಂಬಲವಾಗಿ ಅನೇಕ ಕಾರ್ಯಕರ್ತರು ರಾಷ್ಟ್ರೀಯ ಚಳುವಳಿಗಳಿಗೆ ಧುಮುಕಿದರು.

ದಿನಾಂಕ ೩೦-೧೦-೧೯೩೮ ರಂದು ಸ್ವಾಮೀಜಿಯವರು ಪ್ರಥಮ ಸರ್ವಾಧಿಕಾರಿಯಾಗಿ ಸತ್ಯಾಗ್ರಹ ಕೂತರು. ರಾಜ್ಯ ಕಾಂಗ್ರೇಸ ಮೇಲಿನ ನಿಷೇದವನ್ನು ಹಿಂತೆಗೆದುಕೊಳ್ಳುವಂತೆ ಅವರು ನಿಜಾಮನನ್ನು ಒತ್ತಾಯಿಸಿದರು. ಅವರ ಬಂಧನದ ಸಂದರ್ಭದಲ್ಲಿ ಅವರು ಯುವಕರಿಗೆ ನೀಡಿದ ಕರೆಯು ಉಲ್ಲೇಖನೀಯವಾಗಿದೆ.

"ಯುವಜನರೇ, ನೆನಪಿನಲ್ಲಿ ಕ್ರೂರ ಆಳ್ವಿಕೆಯನ್ನು ವಿರೋಧಿಸುವುದು ದೈವರಾದನೆ ಇದ್ದಂತೆ. ನಾವು ಮಧ್ಯದಲ್ಲಿ ನಿಲ್ಲಿಸಿರುವ ಕೆಲಸವನ್ನು ಕೈಗೆತ್ತಿಕೊಳ್ಳಿ ನಮ್ಮದು ಶುದ್ಧ ರಾಷ್ಟ್ರೀಯ ಹೋರಾಟ. ವಿಮೋಚನೆಗಾಗಿ ಹೋರಾಟಮಾಡಿ. ನಿಜಾಮನ ದಬ್ಬಾಳಿಕೆಗೆ ಗಮನ ಕೊಡಬೇಡಿ. ನಿಮ್ಮ ಆಪ್ತರು-ಹಿತೈಷಿಗಳು ಅಡ್ಡ ಬಂದರೂ ನಿಲ್ಲಬೇಡಿ. ಮನ್ನುಗ್ಗುವುದೇ ನಮ್ಮ ಗುರಿ"[೧೩]

ಕಾರಾಗೃಹದಲ್ಲಿದ್ದಾಗ ಜನರ ಅಭಿಪ್ರಾಯಕ್ಕೆ ಮುನ್ನಕೊಡುವಂತೆ ನಿಜಾಮನನ್ನು ಅವರು ಒತ್ತಾಯಿಸಿದರು. ಆವಾಬ್ದಾದಾರಿ ಸರಕಾರ ರಚಿಸುವಂತೆ ಕೇಳಿಕೊಂಡರು ನಿಜಾಮನ ಜೊತೆ ಎಲ್ಲಾ ವಿವಿಧ ಸಂಧಾನವನ್ನು ತಿರಸ್ಕರಿಸಿದ ಸ್ವಾಮಿಜಿಯವರು ಹಿಂದು ಮುಸ್ಲಿಮರು ೫೦:೫೦ ರ ಅನುಪಾತದಲ್ಲಿ ಪ್ರಾತಿನಿಧ್ಯವಿರುವ ಜನಪ್ರಿಯ ಅಸೆಂಬ್ಲಿ ರಚನೆಯ ಸಲಹೆಯನ್ನು ತಿರಸ್ಕರಿಸಬೇಕೆಂದು ಅವರು ಜನರಿಗೆ ಕರೆ ನೀಡಿದರು. ಗಾಂಧೀಜೀಯವರ ಸೂಚನೆಯ ಮೇರೆಗೆ ೧೯೩೭ ರಲ್ಲಿ ಸತ್ಯಾಗ್ರಹವನ್ನು ನಿಲ್ಲಿಸಿದಾಗ ಸ್ವಾಮೀಜೀಯವರು ಬಿಡುಗಡೆಯಾಯಿತು.

ದಿನಾಂಕ ೧೧-೦೯-೧೯೪೦ ರಂದು ವ್ಯಕ್ತಿಗತ ಸತ್ಯಾಗ್ರಹ ನಡೆಸಲು ಸ್ವಾಮೀಜೀಯವರು ಗಾಂಧೀಜಿಯವರಿಂದ ಅನುಮತಿ ಪಡೆದರು. ಈ ಸಂಧರ್ಭದಲ್ಲಿ ಬಂಧಿತರಾದ ಸ್ವಾಮೀಜಿಯವರನ್ನು ನಿಜಾಮ ಸರ್ಕಾರವು ನಿಜಾಮಬಾದದ್ ಕೇಂದ್ರಕಾರಾಗೃಹದಲ್ಲಿ ೧೫ ತಿಂಗಳ ಕಾಲ ಬಂಧನದಲ್ಲಿಟ್ಟರು. ೧೯೪೨ರಲ್ಲಿ ಅವರು ಮತ್ತೆ ಭಾರತ ಬಿಟ್ಟುತೊಲಗಿ' ಚಳುವಳಿಯಲ್ಲಿ ಭಾಗವಹಿಸಿದಾಗ ೧೬ ತಿಂಗಳು ಸ್ಥಾನ ಬದ್ಧತೆ ಒಳಗಾದರು.

೧೯೪೭-೪೮ ರಾಜ್ಯ ಕಾಂಗ್ರೆಸ ಎಲ್ಲಾ ಚಟುವಟಿಕೆಗಳ ಹಿಂದಿನ ಚಾಲಕ ಶಕ್ತಿಯಾಗಿದ್ದ ಸ್ವಾಮೀಜಿಯವರು ಸಂಘರ್ಷಕ್ಕೆ ನೆರವಾಗಿ ನಿರ್ದೇಶನ ನೀಡುತ್ತಿದ್ದರು. ರಾಜಕೀಯ ಜಾಗೃತಿಯನ್ನು ಬೆಳಗಿಸುವ ಬೆಂಕಿಯ ಚಂಡಿನಂತೆ ಸ್ವಾಮೀಜೀಯವರು ಹೈದರಾಬಾದ ಜನತೆಗೆ ಕಂಡರು.

ಹೈದರಾಬಾದ ರಾಜ್ಯ ಕಾಂಗ್ರೆಸ ರಚನೆಯ ಸಂದರ್ಭದಲ್ಲಿ ಅವರು ಪೋಲಿಸ ಕಮೀಷನರವರಿಗೆ ಬರೆದ ಒಂದು ಪತ್ರ ಕುತೂಹಲಕಾರಿಯಾಗಿದೆ.

ನವಾಬ್ ರಹಮತ್ ಯಾರ ಜಂಗ ಬಹುದ್ದೂರವರಿಗೆ,

ನಗರ ಪೊಲೀಸ ಕಮೀಷನರ,

ನಿಜಾಮ ಸರ್ಕಾರ,

ಸ್ವಾಮಿ,

ಹೈದರಾಬಾದ ರಾಜ್ಯ ಕಾಂಗ್ರೇಸಿನ ಕಾರ್ಯಕಾರಿ ಮಂಡಳಿಯು ನನ್ನನ್ನು ಪ್ರಥಮ ಸರ್ವಾಧಿಕಾರಿಯಾಗಿ ಆರಿಸಿದ ಮತ್ತು ಕಾರ್ಯಕಾರಿ ಮಂಡಳಿಯ ಎಲ್ಲಾ ಅಧಿಕಾರಿಗಳನ್ನು ನನ್ನ ವಶಕ್ಕೆ ನೀಡಲಾಗಿದೆ.

ಪುತಲಿ ಚೌಡಿ ಠಾಣೆಯ ಹತ್ತಿರ ನಾಲ್ಕು ಜನ ಸಂಘಟನಾ ಕಾರ್ಯದರ್ಶಿಗಳ ಜೊತೆಯಲ್ಲಿ ಇಂದು ಮಧ್ಯಾಹ್ನ ೩ ಗಂಟೆಗೆ ಹೈದರಾಬಾದ ರಾಜ್ಯ ಕಾಂಗ್ರೇಸನ ಕೆಲಸಗಳನ್ನು ನಾನು ಪ್ರಾರಂಭಿಸುತ್ತಿದ್ದೇನೆ. ಈ ಬಗ್ಗೆ ತಾವು ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಮನವಿ ಮಾಡಿಕೊಳ್ಳತ್ತೇನೆ.

ಧನ್ಯವಾದಗಳೊಂದಿಗೆ

೨೭ ಅಕ್ಟೋಬರ ೧೯೩೮

ಜಾಂಬಗ ಹೈದರಾಬಾದ.

ಸ್ವಾಮೀ ರಮಾನಂದ ತೀರ್ಥ (ಸಹಿ)

ಪ್ರಥಮ ಸರ್ವಾಧಿಕಾರಿ

ಹೈದರಾಬಾದ ರಾಜ್ಯ ಕಾಂಗ್ರೇಸ.[೧೪]

ಜೈಲಿನ ಒಳಗಡೆಯಿಂದಲೇ ಪ್ರಜೆಗಳಿಗೆ "ಸ್ನೇಹಿತರೇ ನಾವು ಮಾಡುವ ಯಾವ ತ್ಯಾಗವು ಈ ಹೋರಾಟದಲ್ಲಿ ಸಣ್ಣದೆ ಆಗಿ ಕಾಣುತ್ತದೆ. ನಾವು ಸೆರೆಮನೆಯಲ್ಲಿಯೇ ಸತ್ತರೂ ಸೈ. ಹೈದರಾಬಾದಿನಲ್ಲಿ ಸ್ವತಂತ್ರ್ಯ ಸೂರ್ಯ ಮಾಡುವ ದಿನಗಳು ದೂರಿಲ್ಲ. ನಮ್ಮದು ಅಸಮಾನ್ಯ ಹೋರಾಟ ನಾನಂತೂ ಕೊನೆಯವರೆಗೆ ಹೋರಾಡುತ್ತೇನೆ. ನನ್ನನ್ನು ಗುಂಡಿಕ್ಕಿ ಕೊಂದರು ಸೈ."

ಭಾರತದ ಧ್ವಜವನ್ನು ನಿಜಾಮರ ನೆಲದಲ್ಲಿ ಆಕಾಶದೆತ್ತರಕ್ಕೆ ಹಾರಿಸುವೆ ಎಂದು ಗುಡುಗಿದರು. ಅವರು ೧೯೩೦ ರಿಂದಲೇ ಜಗತ್ತಿನ ಶ್ರೀಮಂತ, ನಿರಂಕುಶ ಕ್ರೂರ ದೊರೆ ಎನಿಸಿದ ನಿಜಾಮರ ವಿರುದ್ದ ಹೋರಾಡಿ ಅವರನ್ನು ಸಿಂಹಾಸನದಿಂದ ಕೆಳಕ್ಕಿಳಿಸಿದುದು ಹಗುರ ವಿಷಯವಲ್ಲ.

ಯಾವ ಆಸೆಗೂ ಬಲಿ ಬೀಳದೆ ಹೈದರಾಬಾದ ವಿಮೋಚನೆಗಾಗಿ ಹೋರಾಡಿದ ಪೂಜ್ಯ ಶ್ರೀ ಸ್ವಾಮಿ ರಮಾನಂದ ತೀರ್ಥರು ಹುಟ್ಟು ಕನ್ನಡಿಗರೆಂಬುದು ಇನ್ನು ಕರ್ನಾಟಕಕ್ಕೆ ತಿಳಿಯಬೇಕಾಗಿದೆ. ಕನ್ನಡಿಗರಾದ ಅವರಿಗೆ ಕರ್ನಾಟಕ ತೋರಬೇಕಾದ ಗೌರವ ತೋರಿಲ್ಲ.

ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾಗಿರುವ ಹೈದರಾಬಾದ ಸ್ವಾತಂತ್ರ್ಯಸೂರ್ಯ ಸ್ವಾಮಿ ರಮಾನಂದರ ತೀರ್ಥರ ಲೇಖನದಿಂದ.

## ೬ ಗ್ರಂಥಾಲಯ ಚಳುವಳಿ ಹಾಗೂ ಪತ್ರಿಕೋದ್ಯಮ

ನಿಜಾಮನ ರಾಷ್ಟ್ರೀಯ ವಿರೋಧಿ ಫರ್ಮಾನಗಳು ಜಾರಿಯಲ್ಲಿದ್ದರು ಸಹರಾಷ್ಟ್ರೀಯ ಶಾಲೆಗಳ ಚಟುವಟಿಕೆಗಳಿಂದಾಗಿ. ರಾಷ್ಟ್ರೀಯವಾದಿ ಪತ್ರಿಕೆಗಳ ಪ್ರಸಾರದಿಂದಾಗಿ ಮತ್ತು ಪ್ರಚಾರ ಸಂಚಾರದಿಂದಾಗಿ ಹೈದರಾಬಾದ ಸಂಸ್ಥಾನದಾದ್ಯಂತ ಗ್ರಂಥಾಲಯ ಚಳುವಳಿ ಹಾಗೂ ಪತ್ರಿಕೋದ್ಯಮ ಚಳುವಳಿ ಎಂಬ ಹೆಸರಿನ ಚಳುವಳಿಯೇ ನಡೆದುಹೋಯಿತು. ಗ್ರಂಥಾಲಯ ಚಳುವಳಿಯ ಅಂಗವಾಗಿ ಹೈದರಾಬಾದ ಸಂಸ್ಥಾನದ ತುಂಬೆಲ್ಲಾ ಅನೇಕ ಗ್ರಂಥಾಲಯಗಳು ಸ್ಥಾಪನೆಯಾದವು. ಬೀದರ ಜಿಲ್ಲೆಯ ಕೆಲವು ಕಡೆ ಗ್ರಂಥಾಲಯಗಳನ್ನು ಸ್ಥಾಪಿಸಲಾಯಿತು. ಆರ್ಯಸಮಾಜ ಗ್ರಂಥಾಲಯವನ್ನು ಬಸವಕಲ್ಯಾಣದಲ್ಲಿ ಗೋಪಾಲ ದೇವಶಾಸ್ತ್ರಿಯವರು ಸ್ಥಾಪಿಸಿದರು. ಇದರ ನೆರವಿನಿಂದ ಹಲವಾರು ಕಡೆಗಳಲ್ಲಿ ಈ ಚಳುವಳಿಯನ್ನು ಹುಟ್ಟು ಹಾಕಲಾಯಿತು.

ಸ್ವಾತಂತ್ರ್ಯ ಹೋರಾಟಗಾರರಿಗೆ ರಾಜಕೀಯ ಸಭೆಗಳನ್ನು ಸರ್ವಜನಿಕವಾಗಿ ನಡೆಸಲು ನಿಜಾಮನ ಫರ್ಮಾನುಗಳಿಂದಾಗಿ ಅವಕಾಶವಿರಲಿಲ್ಲ. ಇದರಿಂದಾಗಿ ಜನ ಗ್ರಂಥಾಲಯವನ್ನು ಮತ್ತು ಭಜನಾ ಮಂಡಳಿಯನ್ನು ಸ್ವದೇಶಿ ಸ್ಫೂರ್ತಿ ಭಾವನೆಯಿಂದ ಸ್ಥಾಪಿಸಿದರು. ಹೈದರಾಬಾದ ಸಂಸ್ಥಾನದಲ್ಲಿ ಹಾಗೂ ಭಾರತದಾದ್ಯಂತ ಸ್ವಾತಂತ್ರ್ಯ ಚಳುವಳಿ ಹೇಗೆ ನಡೆಯುತ್ತಿದೆ ಎಂಬುದರ ವಿವರಗಳು ಸಮಾಚಾರ ಪತ್ರಿಕೆ ಹಾಗೂ ಗ್ರಂಥಗಳ ಮೂಲಕ ಜನರಿಗೆ ದೊರಕುವಂತೆ ಮಾಡುವ ಪರಮ ಗುರಿ ಈ ಗ್ರಂಥಾಲಯ ಚಳುವಳಿಯು ಹೊಂದಿತ್ತು. ಬೀದರಿನಅಶಿಕ್ಷಿತ ಗ್ರಾಮಾಂತರಗಳಲ್ಲಿ ರಾಷ್ಟ್ರೀಯತೆಯ ಭಾವನೆಯನ್ನು ಬಲಪಡಿಸಲು ಭಜನಾ ಮಂಡಳಿಗಳು ಸ್ಥಾಪನೆಯಾದವು. ಇದರಂಗವಾಗಿ ಸ್ಥಾಪನೆಯಾದ ಬೀದರಿನ ಹಲವಾರು ಗ್ರಾಮದಲ್ಲಿ ಭಜನಾ ಮಂಡಳಿಗಳು ಚಾರಿತ್ರಿಕವಾದವು.

ವಾಚನಾಲಯಗಳಿಗೆ ಬೇಕಾದ ದಿನ ಪತ್ರಿಕೆಗಳನ್ನು, ನಿಯತಕಾಲಿಕೆಗಳನ್ನು ಕೊಳ್ಳಲು ಬೇಕಾದ ಹಣಕಾಸನ್ನು ವ್ಯಾಪಾರಿಗಳು, ಧಾರ್ಮಿಕ ಸಂಸ್ಥೆಗಳು, ಕಾಂಗ್ರೇಸ ಕಾರ್ಯಕರ್ತರು, ಆರ್ಯಸಮಾಜ ಕಾರ್ಯಕರ್ತರು, ಹಿಂದೂ ಸಭಾದ ರಾಷ್ಟ್ರೀಯವಾದಿಗಳು ಸಂಗ್ರಹಿಸುತ್ತಿದ್ದರು.

ಬೀದರನ ಅಲ್ಲಿಯ ವಾಚನಾಲಯಗಳಲ್ಲಿ ಅಂದು ಕಂಡು ಬರುತ್ತಿದ್ದ ಪತ್ರಿಕೆಗಳೆಂದರೆ ಸಂಯುಕ್ತ ಕರ್ನಾಟಕ ಹರಿಜನ, ಲೋಕಮತ, ಕೇಸರಿ, ಮರಾಠ, ನಾಗರಿಕ ಶಿವಾನುಭವ, ಧರ್ಮ ಸಂಜೀವಿನಿ, ಅಂಕುಶ, ಶುಭೋಧಯ, ಸೊಲ್ಲಾಪುರ ಸಮಾಚಾರ ಕನ್ನಡಿಗ ಮತ್ತು ಪ್ರಸಿದ್ದ ಉರ್ದು ಪತ್ರಿಕೆಗಳಾದ ನಿಜಾಮವಿಜಯ, ಶಿಯಶತ್, ಇಮ್ರೋಜ್, ಮಷೀರ–ಇ–ದಖಿನ ಮುಂತಾದವು. ಈವಾಚನಾಲಯಗಳಲ್ಲಿ ಸಾಮಾನ್ಯವಾಗಿ ಚಾರಿತ್ರಿಕವಾದ ಕಥೆ ಕಾದಂಬರಿಗಳು, ಕ್ರಾಂತಿಕಾರಿ ಪುರುಷರ ಜೀವನ ಚರಿತ್ರೆ ಒಳಗೊಂಡ ಕೃತಿಗಳು (ಭಗತಸಿಂಗ್ ಝಾನ್ಸಿರಾಣಿ ಲಕ್ಷ್ಮಿಬಾಯಿ) ಮುಂತಾದವರ ಕೃತಿಗಳನ್ನು ಲೇಖನಗಳನ್ನು ಸಂಗ್ರಹಿಸಿಡಲಾಗಿತ್ತು. ಇವುಗಳ ಅಧ್ಯಯನದಿಂದ ಈ ಭಾಗದಲ್ಲಿ ರಾಷ್ಟ್ರೀಯತೆಯ ಭಾವನೆ ಪ್ರಸಾರವಾಗಲು, ಜಾಗೃತವಾಗಲು ಕಾರಣವಾಯಿತು.

## ೮ ನಿಜಾಮ ಕರ್ನಾಟಕ ಪರಿಷತ್ತು.

ಹೈದರಾಬಾದ ಸಂಸ್ಥಾನದಲ್ಲಿದ್ದ ಕನ್ನಡಿಗರೂ ಪ್ರಾರಂಭದಿಂದಲೂ ಸ. ಸಾಹಿತ್ಯ ಚಟುವಟಿಕೆಗಳಲ್ಲಿ ಆಸಕ್ತಿ ತೋರಿಸುತ್ತಾ ಬಂದಿದ್ದರು. ಸಾಹಿತ್ಯಿಕ ಚಟುವಟಿಕೆಗಳಲ್ಲಿ ಆಸಕ್ತಿ ತೋರಿಸುತ್ತಾ ಬಂದಿದ್ದರು. ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸಾಮಾನ್ಯವಾಗಿ ಸರ್ಕಾರದ ಕ್ರೂರ ದೃಷ್ಟಿಗೆ ಬೀಳುವುದಿಲ್ಲ. ಆದರೆ ಸ್ವಾತಂತ್ರ್ಯದ ಭಾವನೆ ಮತ್ತು ಅದರ ಒತ್ತಾಯಗಳಿಂದ ಸಾಹಿತ್ಯ ಮುಕ್ತವಾಗಿರಲು ಸಾಧ್ಯವಿಲ್ಲ. ರಾಜ್ಯ ಕಾಂಗ್ರೇಸ್ ಮೇಲೆ ನಿಷೇಧವಿದ್ದಾಗ ಸ್ವಾಮೀಜಿಯವರು, ಜನಾರ್ಧನರಾವ ದೇಶಯಿ. ಗುಡಗುಂಟಿ ರಾಮಾಚಾರ ಜೋಷಿ, ಜಿ.ಕೆ. ಪ್ರಾಣೇಶಾಚಾರ ಮುಂತಾದವರು ನಿಜಾಮ ಕರ್ನಾಟಕ ಪರಿಷತನ ಕಾರ್ಯ ಚಟುವಟಿಕೆಗಳಿಗೆ ಮಾರ್ಗದರ್ಶನ ನೀಡುವುದರ ಜೋತೆಗೆ ಸಭೆಗಳನ್ನು ನಡೆಸುತ್ತಿದ್ದರು.

"ಜೊಲ್ವೇರಿನ್ ಸುಂಕ" ಪದ್ದತಿ ಆರ್ಥಿಕ ನೀತಿಯಾಗಿದ್ದರು ಕೂಡಾ ಜರ್ಮನಿ ಏಕೀಕರಣಕ್ಕೆ ಪ್ರೇರಣೆ ನೀಡಿದ ಹಾಗೇ 'ನಿಜಾಮ ಕರ್ನಾಟಕ ಪರಿಷತ್' ಸಾಹಿತ್ಯಿಕ ಕೇಂದ್ರವಾಗಿದ್ದರೂ ಕೂಡಾ ಸ್ವಾತಂತ್ರ್ಯ ಭಾವನೆ ಬೆಳೆಸುವುದರಲ್ಲಿ ಮಹತ್ತರವಾದ ಪತ್ರವನ್ನು ನಿರ್ವಹಿಸಿತು. ನಿಜಾಮ ಕರ್ನಾಟಕ ಪರಿಷತ್ ಮತ್ತೇನೂ ಆಗಿರದೆ ನಿಷೇದಕ್ಕೊಳಪಟ್ಟಿದ್ದ ರಾಜ್ಯ ಕಾಂಗ್ರೆಸ್ ಸ್ಥಗಿತ ಚಟುವಟಿಕೆಳನ್ನು ಮುಂದುವರಿಸುವ ಭಾಗವಾಗಿತ್ತು.

ಅಂತೆಯೇ ರಾಯಚೂರಿನ ಪ್ರಸಿದ್ದ ವಕೀಲರಾಗಿದ್ದ. ಪೀ.ಕೇಶವರಾವರವರು ಅಧ್ಯಕ್ಷತೆಯಲ್ಲಿ ಹೈದರಾಬಾದನಲ್ಲಿ ೨೨–೦೨–೧೯೩೭ ರಂದು ನಿಜಾಮ ಕರ್ನಾಟಕ ಪ್ರಥಮ ಅಧಿವೇಶನ ನಡೆಯಿತು ನಿಜಾಮ ಕರ್ನಾಟಕ ಪರಿಷತ್ತು ಎರಡನೇ ಅಧಿವೇಶನ ಜನಾರ್ಧನರಾವ ದೆಸಾಯಿಯವರ ಅಧ್ಯಕ್ಷತೆಯಲ್ಲಿ ಬೀದರನಲ್ಲಿ ೧೯೪೦ರ ಜನೇವರಿ ೨೫,೨೬,೨೭ ರಂದು ನಡೆಯಿತು.

ಈ ಪರಿಷತ್‌ನ ಅಧಿವೇಶನದಲ್ಲಿ ಹೈದರಾಬಾದ ಕರ್ನಾಟಕ ಪ್ರದೇಶದ ಸಾವಿರಾರು ಪ್ರತಿನಿಧಿಗಳು ಭಾಗವಹಿಸಿದ್ದರು. ವಿದ್ವತಗೆ ಮತ್ತು ಭಾಷಣದಲ್ಲಿ "ಪರಿಷತನ ಗುರಿ ರಾಜಕೀಯ ಸ್ವಾತಂತ್ರ್ಯ ಎಂಬುದನ್ನು ಒತ್ತಿ ಹೇಳುತ್ತಿದ್ದರು. ಹಿಂದು-ಮುಸ್ಲಿಂಯವರಿಗೆ ೫೦:೫೦ ಅನುಪಾತದಲ್ಲಿ ಪ್ರಾತಿನಿಧ್ಯವಿರುವ ಜನಪ್ರಿಯ ಅಸೆಂಬ್ಲಿ ಸ್ಥಾಪಿಸುವ ನಿಜಾಮನ ಸಲಹೆಯನ್ನು ನಿರ್ಣಯದಲ್ಲಿ ರಾಜ್ಯ ಕಾಂಗ್ರೆಸ್ ಮೇಲಿನ ನಿಷೇಧವನ್ನು ರದ್ದು ಪಡಿಸುವಂತೆ ಹಾಗೂ ನಾಗರಿಕ ಹಕ್ಕುಗಳನ್ನು ಒದಗಿಸುವಂತೆ ನಿಜಾಮನನ್ನು ಒತ್ತಾಯಿಸಲಾಯಿತು.೧೬

ಬೀದರನಲ್ಲಿ ನಡೆದ ಅಧಿವೇಶನದ ಯಶಸ್ವಿಗಾಗಿ ಭಾಲ್ಕಿಯ ಚನ್ನಬಸವ ಪಟ್ಟದೇವರು. ಅಪ್ಪಾರಾವ, ಪ್ರಭುರಾವ ಕಂಬ್ಳಿವಾಲ ಮತ್ತು ರಂಗನಾಥರಾವ ಸಾಯಗಾಂವಕರ್ ಮತ್ತು ನ್ಯಾಯವಾದಿ ಕಿಚ್ಚನ್ನು ಹಚ್ಚಲು ಪ್ರೇರಣೆಯಾಯಿತು.

ಅಣ್ಣಾರಾವ ಗಣಮುಖಿಯವರ ಅಧ್ಯಕ್ಷತೆಯಲ್ಲಿ ನಿ.ಕ.ಪ ೩ನೇ ಅಧಿವೇಶನ ಮಾರ್ಚ ೧೯೪೭ ರಲ್ಲಿ ಸುರಪುರದಲ್ಲಿ ನಡೆಯಿತು. ಈ ಅಧೀವೇಶನ ಭಾರತ ಬಿಟ್ಟು ತೊಲಗಿ ಚಳುವಳಿ ನಡೆದ ಕಾಲದಲ್ಲಿ ಸಂಘಟಿಸಿದ್ದರಿಂದ ಐತಿಹಾಸಿಕವಾಗಿ ಮಹತ್ವ ಪಡೆದುಕೊಂಡಿದೆ. ಕಕ್ಕೇರಿ ಹನುಮಂತರಾವರವರ ಅಧ್ಯಕ್ಷತೆಯಲ್ಲಿ ರಾಯಚೂರಿನಲ್ಲಿ ಮೇ ೧೯೪೪ ರಲ್ಲಿ ಪರಿಪತ್‌ನ ೪ ಸಮಾವೇಶ ನಡೆದು 'ರಾಜ್ಯ ಕಾಂಗ್ರೆಸ್ ಮೇಲಿನ ನಿಷೇಧ ಹಿಂಪಡೆಯುವಂತೆ ಒತ್ತಾಯಿಸಲಾಯಿತು.

ಈ ಎಲ್ಲಾ ಅಧಿವೇಶನಗಳ ಪ್ರಭಾವದಿಂದಾಗಿ ಹೈದರಾಬಾದ ಸಂಸ್ಥಾನದ ಪ್ರತಿಭಾಗದಲ್ಲು ಚಳುವಳಿ ತೀವ್ರ ಸ್ವರೂಪ ಪಡೆದುಕೊಂಡಾಗ ಒತ್ತಡಕ್ಕೆ ಒಳಗಾದ ನಿಜಾಮನು ೩ ಜುಲೈ ೧೯೪೬ ರಂದು ರಾಜ್ಯ ಕಾಂಗ್ರೆಸ ಮೇಲಿನ ನಿಷೇಧವನ್ನು ರದ್ದು ಪಡಿಸಿದನು. ಈ ಸಂಧರ್ಭವನ್ನು ಬಳಸಿಕೊಂಡು ಬೀದರನ ಮಹಾಜನತೆ ನಾವು ಕೂಡಾ ರಾಜ್ಯ ಕಾಂಗ್ರೇಸನಡಿಯಲ್ಲಿ, ಸ್ವಾಮೀಜಿಯವರನ್ನು ಮಾರ್ಗದರ್ಶಕರಾಗಿ ಸ್ವೀಕರಿಸಿ ಹೋರಾಟಮಾಡುವ ದಿಕ್ಷೆ ತೊಟ್ಟರು. ಕರ್ನಾಟಕ. ನಿಜಾಮ ಪರಿಷತ್ತಿನ ನಡಾವಳಿಗಳು, ಕೈಗೊಳ್ಳುತ್ತಿದ್ದ ಸಮಾವೇಶಗಳಿಗೆ ಹೈದರಾಬಾದ ಕರ್ನಾಟಕದ ಸಾವಿರಾರು ಕಾರ್ಯಕರ್ತರು ಸ್ಪಂದಿಸುತ್ತಿದ್ದರು. ಅದಕ್ಕೆ ಬೀದರನ ರಾಷ್ಟ್ರೀಯ ವಾದಿಗಳು ಕೂಡಾ ಹೊರತಾಗಿರಲಿಲ್ಲ. ಈ ಸುಸಂದರ್ಭವನ್ನು ಉಪಯೋಗಿಸಿಕೊಂಡ ಕಾಂಗ್ರೇಸ ಕಾರ್ಯಕರ್ತರು ಹೈದರಾಬಾದ ನಾಗಲ ನಗರದಲ್ಲಿ ೧೯೪೬ ಅಗಸ್ಟ ೧೬ ರಿಂದ ೧೮ ರ ವರೆಗೆ ಸ್ವಾಮಿ ರಮಾನಂದ ತೀರ್ಥರವರ ಅಧ್ಯಕ್ಷತೆಯಲ್ಲಿ 'ಪ್ರಥಮ' ಅಖಿಲ ಹೈದರಾಬಾದ ರಾಜ್ಯ ಕಾಂಗ್ರೆಸ್ ಅಧಿವೇಶನ ಸಂಘಟಿಸಿದರು ಮತ್ತು ಆ ಅಧಿವೇಶದಲ್ಲಿ ೩ ಭಾಷಾ ಪರಿಷತ್ತುಗಳನ್ನು ವಿಲೀನಗೊಳಿಸುವ ನಿರ್ಣಯವನ್ನು ಜಾರಿಗೊಳಿಸಲಾಯಿತು.

ಜನರ ಮನಸ್ಸಿನಲ್ಲಿ ಸ್ವಾತಂತ್ರ್ಯದ ಬಗ್ಗೆ ನಿಷ್ಠೆಯನ್ನು ಹಾಗೂ ದೇಶಭಕ್ತಿಯ ಕಿಚ್ಚನ್ನು ಹೊತ್ತಿಸುವ ಸಲುವಾಗಿ ಹೈದರಾಬಾದ ಕರ್ನಾಟಕ ವಿವಿಧ ಸ್ಥಳಗಳಲ್ಲಿ ನಿ.ಕ.ಪರಿಷತ್ತಿನ ಶಾಖೆಗಳನ್ನು 'ಕರ್ನಾಟಕ ಸಾಹಿತ್ಯ ಸಂಘ'ಗಳ ಹೆಸರಿನಿಂದ ಪ್ರಾರಂಭಿಸಲಾಯಿತು. ಸಾಹಿತ್ಯ ವೇದಿಕೆಯಾಗಿದ್ದರು. ಸಹ ನಿ.ಕ.ಪ ಎಲ್ಲರ ಮನಸ್ಸಿನಲ್ಲಿ ಸ್ವಾತಂತ್ರ್ಯದ ಭಾವನೆ ಮೊಳೆಯುವಂತೆ ಮೂಡಿತು ಮತ್ತು ನಿಜಾಮನು ಸರ್ವಾಧಿಕಾರಿ ಆಳ್ವಿಕೆ ವಿರುದ್ಧ ಚಳುವಳಿ ನೀಡಿಸಬಲ್ಲಂತಹ ಕೆಚ್ಚದೆಯ ದೇಶ ಭಕ್ತರನ್ನು ಅದು ತಯಾರಿ ಮಾಡಿಕೊಟ್ಟಿತು.

ಕನ್ನಡ ಪರಿಷತ್ತಿನ ಚಟುವಟಿಕೆಗಳಿಂದಾಗಿ ರಾಷ್ಟ್ರೀಯತೆ ಪ್ರವಾಹನುಗ್ಗಿ ಹರಿಯುವಂತಾಯಿತು. ಹೀಗೆ ಹಲವಾರು ಚಟುವಟಿಕೆಗಳು ಬೀದರನ ತಾಲೂಕಿನಾದ್ಯಂತ ಜರುಗಿದವು. ರಾಷ್ಟ್ರಿಯತೆ ಬೆಳವಣಿಗೆ ಕಾರಣವಾಯಿತು.



**೯ ಕೀರ್ತನೆಗಳ ಪ್ರಭಾವ:**

ತಿಲಕರು ಭಾರತಾದ್ಯಂತ ಧಾರ್ಮಿಕವಾಗಿ ಗಣೇಶ, ಬಸವ ಜಯಂತಿ, ಶಿವಾಜಿ ಉತ್ಸವ, ದಸರಾ ಇತ್ಯಾದಿ. ಹಬ್ಬ ಹರಿದಿನಗಳನ್ನು ಉಪಯೋಗಿಸಿಕೊಂಡು, ಜನರಲ್ಲಿ ರಾಜಕೀಯ ಜಾಗೃತಿ ಮೂಡಿಸಿದಂತೆ ಹೈದರಾಬಾದ ಕರ್ನಾಟಕದಲ್ಲಿಯೇ ಸಹ ಮಠಾಧಿಪತಿಗಳು ಭಜನಾ ಮಂಡಳಿಗಳು, ಕರ್ನಾಟಕ ಸಾಹಿತ್ಯ ಸಂಘಗಳು. ಹಬ್ಬ ಹರಿದಿನ ಉತ್ಸವಗಳಲ್ಲಿ ಸಭೆ-ಸಮಾರಂಭಗಳಲ್ಲಿ ಕೀರ್ತನೆಯ ಕಾರ್ಯಕ್ರಮಗಳನ್ನು ಏರ್ಪಡಿಸುವದರ ಮೂಲಕ ಜಾಗೃತಿ ಮೂಡಿಸಲು ಪ್ರಯತ್ನಿಸಿದರು.

**ಕೀರ್ತನ ಕೇಸರಿ ಕೊಪ್ಪಳದ ಜಯರಾಮಾಚಾರ್ಯ:**

ಜಯರಾಮಾಚಾರ್ಯರ ವ್ಯಕ್ತಿತ್ವ ಅತ್ಯಂತ ವರ್ಣಮಯವಾಗಿತ್ತು. ಅವರು ಶ್ರೇಷ್ಠ ವಾಗ್ಮಿಗಳಾಗಿದ್ದರಲ್ಲಿದೇ. ದೇಶಾಭಿಮಾನಿಗಳು ಆಗಿದ್ದರು. ೧೯೨೦ ಅಸಹಕಾರ ಚಳುವಳಿಯಲ್ಲಿ ಅವರು ರಾಷ್ಟ್ರವನ್ನು ಜಾಗೃತಗೊಳಿಸುವ ರಾಜಕೀಯ ಕೀರ್ತನೆಗಳನ್ನು ಪ್ರಾರಂಭಿಸಿದರು. ಅದರ ಅಮೋಘವಾದ ಶೈಲಿಗೆ ಜನರು ಮುಗ್ದರಾಗಿ ಹೋಗುತ್ತಿದ್ದರಲ್ಲಿದೆ ಸಾವಿರ, ಸಾವಿರ ಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಇದನ್ನು ಕಂಡ ಹಿಂದಿನ ತಲೆಮಾರಿನವರು ಇವತ್ತಿಗೂ ಅವರನ್ನು ಸ್ಮರಿಸುತ್ತಾರೆ.

ಜಯರಾಮಾರ್ಚರಿಗೆ ಜಾತಿ-ಮತ-ಪಂಥಗಳನ್ನು ಮಿರಿದ ಮಾನವಿಯತೆ ಇತ್ತು.

ಅವರು ವೈಷ್ಣವ ಮಠಗಳಲ್ಲಿಯೂ ಅಂತೇಯೇ ವೀರಶೈವ ಮಠಗಳಲ್ಲಿಯ ಕೀರ್ತನೆಗಳನ್ನು ಮಾಡಿ ಎಲ್ಲರ ಮೆಚ್ಚಗೆಗೆ ಪಾತ್ರರಾಗಿದ್ದರು. ನಿಜಾಮ ಕರ್ನಾಟಕ ಪರಿಷತ್ತಿನ ಎರಡನೆಯ ಸಮ್ಮೇಳನ ಬೀದರಿನಲ್ಲಿ ಆಗಬೇಕೆಂದು ನಿರ್ಧರಿಸಿದಾಗ ಅಲ್ಲಿಯ ಪರಿಸ್ಥಿತಿಯಿಂದಾಗಿ ಸಾಧ್ಯವಾಗಿರಲಿಲ್ಲ.

ಆಗ ಜಯರಾಮಚಾರ್ಯರು ಬೀದರಿನಲ್ಲಿ ಕೆಲವು ದಿನ ಮುಕ್ಕಾಮ ಮಾಡಿ ತಮ್ಮ ಕೀರ್ತನೆಗಳ ಮೂಲಕ ಅಲ್ಲಿಯ ಕನ್ನಡ ಪರವಾದ ಸಂಘಟನೆಗಳಲ್ಲಿ ಧೈರ್ಯ ತುಂಬಿ ೧೯೪೦ ರಲ್ಲಿ ಎರಡನೆಯ ಸಮ್ಮೆಳನ ನಡೆಯುವಂತೆ ಮೂಡಿದರು.

೧೯೦೪ ರಲ್ಲಿ ಅವರ ಕೀರ್ತನೆ ಕೇಳಲು ಬೀದರನಲ್ಲಿ ೫೦೦೦ ಜನರು ಎಲ್ಲ ಕಡೆಗಳಿಂದಲೂ ಬಂದಿದ್ದರು. ಇದು ಅವರ ಕೀರ್ತನೆಗಳಲ್ಲಿರುವ ಶಕ್ತಿಯನ್ನು ತೋರಿಸಿಕೊಡುತ್ತದೆ. ಈ ಕೀರ್ತನೆಗಳಲ್ಲಿ ಅವರು ರಾಷ್ಟ್ರೀಯ ಚಳುವಳಿಯಲ್ಲಿ ಸಂಭವಿಸಿದ ಘಟನೆಗಳನ್ನು ಉಲ್ಲೇಖಿಸುವುದಲ್ಲ. ಕೀರ್ತನೆಗಳ ಮದ್ಯದಲ್ಲಿ ಸ್ವತಂತ್ರ್ಯ ಹೋರಾಟಗಾರರು ಹುತಾತ್ಮರ ಜೀವನ ಹೋರಾಟಗಳನ್ನು ವಿವರಿಸಿ ಜನರ ಹೃದಯದಲ್ಲಿ ದೇಶಭಕ್ತಿ ಕಿಡಿಯನ್ನು ಬೆಳಗಿಸುತ್ತಿದ್ದರು. ಅವರು ರಾಮಾಯಣ ಮಹಾಭಾರತ ಕಥೆಗಳನ್ನು ಆಧಾರವಾಗಿಟ್ಟುಕೊಂಡು ಕೀರ್ತನೆಗಳನ್ನು ಹೆಣೆಯುತ್ತಿದ್ದರು. ಆದರೆ ಅದರಲ್ಲಿ ನಿಜಾಮನ ರಾಕ್ಷಸಿ ಆಡಳಿತ, ರಜಾಕಾರರ ಸೈತಾನಿ ಅತ್ಯಾಚಾರಗಳು ಸ್ಪಷ್ಟವಾಗಿ ಧ್ವನಿತವಾಗುತ್ತಿದ್ದವು. ಇವೆಲ್ಲಾ ಪ್ರಚೋದನಾತ್ಮಕ ವಿಚಾರಗಳೇ ಆಗಿದ್ದವು. ಆದರೆ ಮೇಲೆ ಪುರಾಣ ಕತೆಗಳ ಲೇಪನವಿರುತ್ತಿತ್ತು. ಹೀಗಾಗಿ ಕೀರ್ತನೆಗಳೆಂದರೆ ಬರೀ ರಂಜನೆಗಾಗಿ ಇರದೇ ಉದ್ಬೋಧಕವೂ ಆಗಿರುತ್ತಿದ್ದವು.

೧೯೪೨ ರ ಸುರಪುರ ಸಭೆಯಲ್ಲಿಯೂ ಅಪಾರ ಭಾಗವಹಿಸಿ ಅಪಾರವಾಗಿ ಜನರ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ಕೀರ್ತನೆಗಳ, ಪುರಾಣ, ಭಜನಾ ಕಾರ್ಯಕ್ರಮಗಳ ಮೂಲಕ ಸಂಗ್ರಹಿಸಿದ ಹಣವನ್ನು ನಿಜಾಮ ಮತ್ತು ಬ್ರಿಟಿಷರ ವಿರುದ್ದದ ಹೋರಾಟಕ್ಕೆ ಸಹಾಯವಾಗುವಂತೆ ವ್ಯಯ ಮಾಡಿದರು. ಬೀದರನಲ್ಲಿ ನಡೆದ ಕೀರ್ತನೆಯು ಬೀದರ ತಾಲೂಕಿನ ಜನತೆಯಲ್ಲಿ ಹಾಗೂ ರಾಷ್ಟ್ರೀಯವಾದಿಗಳಲ್ಲಿ ಆತ್ಮಸ್ಥೈರ್ಯ ಮತ್ತು ಭಾರತದ ಡಯ್ಯಾರೆನಿಸಿಕೊಂಡ ನಿಜಾಮನ ಕ್ರೂರ ಆಳ್ವಿಕೆಯ ವಿರುದ್ಧ ಹೋರಾಡಲು. ಇನ್ನಷ್ಟು ಸಂಘಟಿತರಾಗಲು ಕೀರ್ತನೆಗಳು ಅಭೂತ ಪೂರ್ವ ಯಶಸ್ಸೂನ್ನು ಕಂಡವು.

ಕೀರ್ತನೆ ಕೇಸರಿ ಬಿ.ಶಿವಮೂರ್ತಿಶಾಸ್ತ್ರಿ, ಪಂ.ಕಲ್ಲಿನಾಥ ಶಾಸ್ತ್ರಿಗಳನ್ನು ಶ್ರೇಷ್ಠ ಕೀರ್ತನಾಕಾರರಾಗಿದ್ದರು.

<u>ಅಡಿ ಟಿಪ್ಪಣಿಗಳು</u>

೦೧. ಅಸ್ವತ್ಥಪ್ಪ.ಕೆ.ಎನ್; ಇತಿಹಾಸ-॥, ಪು – ೧೨೬

೦೨. ಮಹಾಬಲೇಶ್ವರಪ್ಪಾ.ಬಿ.ಸಿ; ಹೈ.ಕ.ದಲ್ಲಿ ರಾಜಕೀಯ ಚಳುವಳಿಗಳು, ಪು – ೩೬.

೦೩. ಅದೇ, ಪು – ೩೭

೦೪. ಅದೇ, ಪು – ೩೮

೦೫. ಅದೇ, ಪು – ೩೮

೦೬. ಅದೇ, ಪು – ೩೯

೦೭. ಸದಾಶಿವ.ಕೆ; ಸಮಗ್ರ ಭಾರತದ ಇತಿಹಾಸ, ಪು – ೨೮೭

೦೮. ಮಹಾಬಲೇಶ್ವರಪ್ಪಾ.ಬಿ.ಸಿ; ಹೈ.ಕ.ರಾ.ಚಳುವಳಿಗಳು, ಪು – ೪೨

೦೯. ಪು – ೪೨

೧೦. ಅದೇ, ಪು – ೪೭

೧೧. ಬಾಲಚಂದ್ರ ಜಯಶೇಟ್ಟಿ; ಹೈ.ಕ.ವಿಮೋಚನಾ ಚಳುವಳಿ, ಪು – ೯೫

೧೨. ಮಹಾಬಲೇಶ್ವರಪ್ಪಾ.ಬಿ.ಸಿ; ಹೈ.ಕ.ರಾ.ಚಳುವಳಿಗಳು, ಪು.೫೪

೧೩. ಅದೇ, ಪು – ೫೩

೧೪.ಸಂಯುಕ್ತ ಕರ್ನಾಟಕ ಪತ್ರಿಕೆಯ ಲೇಖನ; ಹೈದರಾಬಾದ ಸ್ವಾತಂತ್ರ್ಯ ಸೂರ್ಯ ಸ್ವಾಮಿ ರಮಾನಂದ ತೀರ್ಥರು.

## ಅಧ್ಯಾಯ – ೫

# ರಜಾಕಾರರ ಹಾವಳಿ

ಹೈದರಾಬಾದ ಸಂಸ್ಥಾನದ ವಿಲೀನ ಚಳುವಳಿಯನ್ನು ರಜಾಕಾರರ ಹಾವಳಿ ಒಂದು ಭಯಾನಕ ಹಾಗೂ ನಿರ್ಣಾಯಕ ಅಧ್ಯಾಯವಾಗಿದೆ. "ಮಜ್ಲೀಸ್-ಏ-ಇತ್ತೆಹಾದ ಉಲ್ ಮುಸ್ಲಿಮೀನ್" ಸಂಸ್ಥೆಯ ಹುಟ್ಟಿನಲ್ಲಿ ರಜಾಕಾರರ ಹುಟ್ಟು ಮತ್ತು ಬೆಳವಣಿಗೆ ಅಡಗಿದೆ. "ಸಂಸ್ಥಾನದಲ್ಲಿ ಮುಸ್ಲಿಂ ಮತ್ತು ಮುಸ್ಲಿಮೇತರರನ್ನು ಒಲವಹಿಸುವ ಮತ್ತು 'ಧರ್ಮವಾದಿ ನಿರ್ವಾಣಾಧಿಕಾರಿ ಸರಕಾರ' ಸ್ಥಾಪಿಸುವ ಹಿನ್ನಲೆಯಲ್ಲಿ ನಿಜಾಂ ಸರಕಾರದ ನಿವೃತ್ತ ಅಧಿಕಾರಿ ಮಹ್ಮದ ನವಾಜಖಾನ್ ೧೯೨೭ರಲ್ಲಿ ಇತ್ತೆಹಾದ ಸಂಸ್ಥೆಯನ್ನು ಸ್ಥಾಪಿಸಿದರು"೧. ಬಹದ್ದೂರ ಯಾರ ಜಂಗ ಮತ್ತು ನಂತರ ಕಾಸಿಂ ರಜ್ವಿಯು ಈ ಸಂಸ್ಥೆಯ ನಾಯಕತ್ವವನ್ನು ವಹಿಸಿಕೊಂಡರು. ಈ ಸಂಸ್ಥೆಯ ಅನುಯಾಯಿಗಳಿಗೆ ರಜಾಕಾರರು ಎಂದು ಕರೆಯುತ್ತಾರೆ.

'ರಜಾಕಾರರು' ಎನ್ನುವ ಪದ ದೇವರ ಸೇವೆಗೆ ಮೀಸಲಾದ ಸ್ವಯಂ ಸೇವಕ ಎಂದು ಅರ್ಥ ಕೊಡುತ್ತದೆ.

೧೯೪೬ರಲ್ಲಿ ಇತ್ತೆಹಾದ ಸಂಸ್ಥೆಯ ಮುಖ್ಯಸ್ಥನಾಗಿ ಕಾಸಿಂ ರಜ್ವಿ ಅಧಿಕಾರ ವಹಿಸಿಕೊಂಡನು. ಅಲಿಘಡ ಮುಸ್ಲಿಂ ವಿಶ್ವವಿದ್ಯಾಲಯದ ಆವರಣದಲ್ಲಿ ಚಹಾ ಅಂಗಡಿ ನಡೆಸುತ್ತಿದ್ದ ಕಾಸಿಂ ರಜ್ವಿಯು ಅದೇ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಪಡೆದು ಮಹಾರಾಷ್ಟ್ರದ ಲಾತೂರಿನಲ್ಲಿ ವಕೀಲ ವೃತ್ತಿಯಲ್ಲಿ ನಿರತನಾಗಿದ್ದನು. ಈತನ ನಾಯಕತ್ವದಲ್ಲಿ ಇತ್ತೆಹಾದ ಅರೆ ಸೈನಿಕ ಫ್ಯಾಸಿಸ್ಟ ಸಂಸ್ಥೆಯಾಗಿ ರೂಪಗೊಂಡಿತು. ಈ ಸಂಸ್ಥೆ ನಿಜಾಮನ ರಾಜಕೀಯ ಪಕ್ಷ ಅಲ್ಲ. ಇದು ಅಲ್ಲಾ ಹಜರತ್ ದಯಪಾಲಿಸಿದ ಇವೆ ಡೆಕ್ಕನಿನ ಸಾರ್ವಭೌಮ ಶಕ್ತಿಯೆಂದು ಕಾಸಿಂ ರಜ್ವಿ ಘೋಷಿಸಿದನು. ಸಂಸ್ಥಾನದಲ್ಲಿ ಸತ್ಯಾಗ್ರಹ ಚಳುವಳಿಯನ್ನು ನಿರ್ನಾಮ ಮಾಡಲು ಮತ್ತು ದೇಶಭಕ್ತರಲ್ಲಿ ಭಯಹುಟ್ಟಿಸಲು ನಿಜಾಮನ ಅಧಿಕಾರವನ್ನು ಮೊಟಕುಗೊಳಿಸಿ, ಸರಕಾರದ ಸರ್ವಾಧಿಕಾರಿಯಾಗಿ ಕೆಲಸ ನಿರ್ವಹಿಸಲು ಪ್ರಾರಂಭಿಸಿದನು.

ಸಂಸ್ಥಾನದ ಗೃಹ ಸಚಿವರಾದ ಮೊಯಿನ ನವಾಜ ಜಂಗ, ರಕ್ಷಣಾ ಖಾತೆಯ ಅಬ್ದುಲ ರಹಿಂ ಮತ್ತು ನಿಜಾಮನ ರಾಜಕೀಯ ಕಾರ್ಯದರ್ಶಿಯಾಗಿದ್ದ ಪಿಂಗ್ಳೆ ವೆಂಕಟರಡ್ಡಿ ಕಾಸಿಂ ರಜ್ವಿಗೆ ಬೆಂಬಲ ಘೋಷಿಸಿದನು.

ಭಾರತದ ವಿಲೀನವನ್ನು ವಿರೋಧಿಸಿದ ಕಾಸಿಂ ರಜ್ವಿಯು ಸ್ವಾತಂತ್ರ್ಯ ಯೋದರ ಮೇಲೆ ಅತ್ಯಾಚಾರ ಎಸಗಲು ರಜಾಕಾರರಿಗೆ ಶಸ್ತ್ರಾಸ್ತ್ರ ಮದ್ದು ಗುಂಡುಗಳನ್ನು ಒದಗಿಸಿದನು. ಬೆಂಕಿಯುಗಳುವ ಕಣ್ಣು ಹಾಗೂ ಭಾವ ಪೂರ್ಣವಾಗಿ ಆಗಿದ್ದ ಕಾಸಿಂ ರಜ್ವಿ ಮಧ್ಯಯುಗಿನ ರಮ್ಯ ನಾಯಕನಂತೆ ಭ್ರಮೆ ಹುಟ್ಟಿಸಿದನು.

"ಅಜಾದ ಹೈದರಾಬಾದ", ನಿರ್ಮಾಣ ಮಾಡಲು ಹಳ್ಳಿ ಹಳ್ಳಿಗಳಲ್ಲಿ ಕಾಸಿಂ ರಜ್ವಿಯ ಸಲಹೆಯಂತೆ ರಜಾಕಾರರು ಮುಗ್ಧ ಮತ್ತು ಸ್ವಾತಂತ್ರ್ಯ ಪ್ರೇಮಿಗಳ ಮೇಲೆ ದುಷ್ಕೃತ್ಯಗಳನ್ನು ಎಸಗಿದರು.

ಸಂಸ್ಥಾನದ ೫೨ ಸ್ಥಳಗಳಲ್ಲಿ ರಜಾಕಾರರಿಂದ ಕೂಡಿದ ಸಶಸ್ತ್ರ ಪಡೆಗಳನ್ನು ರಜ್ವಿಯು ಸ್ಥಾಪಿಸಿದನು. ೧೯೪೮ರ ಜನೇವರಿಯಲ್ಲಿ ೩೦ ಸಾವಿರ ಸಂಖ್ಯೆಯ ರಜಾಕಾರರ ಪಡೆಯು ೧೯೪೮ರ ಜುಲೈನಲ್ಲಿ ಒಂದು ಲಕ್ಷ ಅರೆ ಸೈನಿಕರ ದೈತ್ಯ ಶಕ್ತಿಯಾಗಿ ಬೆಳೆಯಿತು. ನಿಜಾಮನ ರೇಡಿಯೋ ಸೇವೆ ಕಾಸಿಂ ರಜ್ವಿಯ ವಶದಲ್ಲಿತ್ತು. ರಜಾಕಾರರ ಪಡೆಯಲ್ಲಿ ಕೆಲವು ಹಿಂದೂಗಳು ಕಾರ್ಯನಿರ್ವಹಿಸಿದರು. ಎನ್ನುವ ಸಂಗತಿ ಗಮನಾರ್ಹವಾಗಿದೆ. ಹೈದರಾಬಾದ ಸಂಸ್ಥಾನದ ಹಳ್ಳಿ ಹಳ್ಳಿಗಳಲ್ಲಿ ಮುಗ್ಧ ಜನತೆಯ ಮೇಲೆ ರಜಾಕಾರರು ಅಮಾನವೀಯ ಕೃತ್ಯಗಲು ಬೀದರ ತಾಲ್ಲೂಕಿನ ಹಲವಾರು ಪ್ರದೇಶಗಳಲ್ಲಿ ಜರುಗಿದವು.

ಮಹಿಳೆಯರ ಮಾನಭಂಗ ಲೂಟಿ, ಮುಗ್ದರ ಕೊಲೆ, ಸ್ವಾತಂತ್ರ್ಯ ಹೋರಾಟಗಾರರನ್ನು ಹಿಂಸಿಸಿ ಅವರ ಕೈ ಕಾಲುಗಳಿಗೆ ಬೇಡಿ ತೊಡಿಸಿ ಅವಮಾನಕರ ರೀತಿಯಲ್ಲಿ ಬೀದಿ ಬೀದಿಗಳಲ್ಲಿ ಮೆರವಣಿಗೆ ಮಾಡಿದರು. ಅಲ್ಲದೇ ಹಿಂದೂಗಳು ಬಳಸುವ ನೀರಿನ ಬಾವಿಗಳಲ್ಲಿ ಸಗಣಿ ಮೂಳೆಗಳನ್ನು ಹಾಕುವುದು, ಹಿಂದೂಗಳ ಬೆಳೆಗಳನ್ನು ಲೂಟಿ ಮಾಡುವುದು. ಸಂಪತ್ತನ್ನು ಕೊಳ್ಳೆ ಹೊಡೆಯಲು ಬೆಂಕಿಹಚ್ಚುವ ಕಾರ್ಯದಲ್ಲಿ ರಜಾಕಾರರು ನಿರತರಾದರು. ಬೃಹತ ಮೆರವಣಿಗೆಯಲ್ಲಿ ಚಾಕು ಚೂರಿ ಭರ್ಚಿಗಳನ್ನು ಪ್ರದರ್ಶಿಸುತ್ತಾ ತಾವು ಕೊಂದ ಮಕ್ಕಳ ಶಿರವನ್ನು ಖಡ್ಗಗಳ ತುದಿಗೆ ಸಿಕ್ಕಿಸಿಕೊಂಡು ರಾಕ್ಷಸರಂತೆ ಮೆರೆದಾಡುತ್ತಾ ಗಾಳಿಯಲ್ಲಿ ಗುಂಡು ಹಾರಿಸುತ್ತಾ. ಜವಾಬ್ದಾರಿ ಸರಕಾರವನ್ನು ಒತ್ತಾಯಿಸುವ ಜನರಲ್ಲಿ ಭಯ ಹುಟ್ಟಿಸಿದರು. ದೇವಾಲಯಗಳನ್ನೆಲ್ಲ ನೆಲಸಮಗೊಳಿಸುವ ಪ್ರಯತ್ನ ಮಾಡಿದರು.

'ಓಂ' ಧ್ವಜ, ಭಗವಾಧ್ವಜ, ರಾಷ್ಟ್ರಧ್ವಜ ಮತ್ತು ಗಾಂಧಿ ಟೋಪಿಗಳನ್ನು ಸುಟ್ಟುಹಾಕಿದರು. ಹವನ ಕುಂಡಲಗಳ ಮೇಲೆ ಹಲ್ಲೆ ಮಾಡುತ್ತಿದ್ದರು. ಬೀದರಿನ ಹಲವಾರು ಸ್ವಾತಂತ್ರ್ಯ ಹೋರಾಟಗಾರರ ಬೆರಳುಗಳಿಗೆ ಸೀಮೆಎಣ್ಣೆಯಲ್ಲಿ ನೆನೆಸಿದ ಹತ್ತಿ ಬಟ್ಟೆ ಸುತ್ತಿ ಬೆಂಕಿ ಇಟ್ಟರು.

೧೯೪೭-೪೮ರ ಅವಧಿಯಲ್ಲಿ ನಿಜಾಂ ರಾಜ್ಯದಲ್ಲಿ ಶಾಂತಿ ಮತ್ತು ಕಾನೂನಿನ ವ್ಯವಸ್ಥೆ ಮಾಯವಾಯಿತು. ಎಲ್ಲಿ ನೋಡಿದರೂ ರಜಾಕಾರರ ದಮನಕಾರಿ ಆಳ್ವಿಕೆ ಕಂಡಿತು. ಒಟ್ಟಾರೆಯಾಗಿ ಬೀದರಿನ ತಾಲ್ಲೂಕಿನ ಹಲವಾರು ಗ್ರಾಮಗಳಲ್ಲಿ ಕೋಟಿ ಗಟ್ಟಲೆ ಹಣ ಮತ್ತು ಬೆಲೆ ಬಾಳುವ ಸಾಮಾನುಗಳನ್ನು ರಜಾಕಾರರು ದೋಚಿದರು. ಕೊಲೆ ಮತ್ತು ರೇಪ (ಬಲತ್ಕಾರ) ಮಾಡಿದರು.

ಬೀದರನಲ್ಲಿ ರಜಾಕಾರರ ಹಾವಳಿಂದ ಬೀಕರವಾದ ಒಂದು ಐತಿಹಾಸಿನ ಘಟನೆ ನಡೆಯಿತು. ಆ ಘಟನೆ ಎಂದರೆ "ಬೀದರಿನಲ್ಲಿ ಗಂಜಿಗೆ ಬೆಂಕಿ"

೧೯೩೮ರಲ್ಲಿ ಬೀದರಿನಲ್ಲಿ ನಿಜಾಮು ಕರ್ನಾಟಕ ಪರಿಷಿತ್ತಿನ ಎರಡನೆಯ ಸಮ್ಮೇಳನ ನಡೆಯುಬೇಕಾಗಿತ್ತು. ಆದರೆ ಇಲ್ಲಿಯ ನಾಯಕರು ಸ್ಥಳೀಯ ಅನಾನುಕೂಲ ಪರಿಸ್ಥಿತಿಗಳಿಂದಾಗಿ ಸಮ್ಮೇಳನವನ್ನು ನಡೆಸಲು ಹಿಂದೇಟು ಹಾಕಿದ್ದರು. ಆ ವರ್ಷ ತಪ್ಪಿ ಹೋದ ಸಮ್ಮೇಳನ ಮುಂದೆ ೧೯೪೦ರಲ್ಲಿ ಆಯೋಜಿಸಲಾಯಿತು. ಆದರೆ ಅದೂ ಕೂಡ ಸುಸೂತ್ರವಾಗಿ ನಡೆಯಲಿಲ್ಲ. ಸಮ್ಮೇಳನಕ್ಕೆ ಅನೇಕ ವ್ಯಾಪಾರಿಗಳು ಆರ್ಥಿಕ ನೆರವು ನೀಡಿದರು. ಇಂಥ ಸಮ್ಮೇಳನಕ್ಕೆ ಅನೇಕ ವ್ಯಾಪಾರಿಗಳು ಆರ್ಥಿಕ ನೆರವು ನೀಡಿದ್ದರು. ಇಂಥ ಸಮ್ಮೇಳನ ನಡೆಸಿಕೊಡದೆಂದು ಮತಾಂಧ ಮುಸ್ಲಿಂಮರು ಬೇಡಿಕೆ ನೀಡಿದ್ದರಾದರೂ ಸಮ್ಮೇಳನ ಏರ್ಪಟ್ಟಿತ್ತು. ಬಹಳೇ ಹುರುಪಿನಿಂದ ಸಮ್ಮೇಳನ ನಡೆದಿತ್ತು. ಜನರೆಲ್ಲ ಸಮ್ಮೇಳನದ ಕಾರ್ಯಕ್ರಮದಲ್ಲಿ ಮೈಮರೆತಿರುವಾಗ ಆ ಕಡೆ ನಗರದ ಉಸ್ಮಾನ ಗಂಜನಲ್ಲಿ ಅಂಗಡಿಗಳಿಳೂ ವ್ಯಾಪಾರಿ ಮಳಿಗೆಗಳಿಗೂ, ಅಡತಿ ಅಂಗಡಿಗಳಿಗೂ ಬೆಂಕಿ ಇಡಲಾಗಿತ್ತು. ನೋಡ ನೋಡುತ್ತಿದ್ದಂತೆ ಇಡೀ ಗಂಜ ಪ್ರದೇಶದಲ್ಲಿ ಬೆಂಕಿ ವ್ಯಾಪಿಸಿಕೊಂಡು ದಗ ದಗ ಎಂದು ಜ್ವಾಲೆಗಳು ಅಕಾಶದೆತ್ತರಕ್ಕೆ ಏರಿದ್ದವು, ಬೆಂಕಿಯನ್ನು ಆರಿಸುವ ಎಲ್ಲ ಪ್ರಯತ್ನಗಳು ವಿಫಲವಾದವು. ಪರಿಸ್ಥಿತಿಯ ನಿಯಂತ್ರಣಕ್ಕೆ ಬರುವಷ್ಟರಲ್ಲಿ ಇಡೀ ಗಂಜ ಪ್ರದೇಶ ಸುಟ್ಟು ಬೂದಿಯಾಗಿತ್ತು. ಗಾಂಧೀಜೀಯವರು ಕೂಡಾ ಈ ಘಟನೆಯನ್ನು ಇನ್ನೊಂದು ಲಂಕಾಧಹನವೆಂದು ವಿಷಾದಪಟ್ಟರು.

"ಲಂಕಾ ದಹನದ ತರುವಾಯು ಬಂತು ಬೀದರ ದಹನ" ಎಂದು ಉದ್ಗಾರ ತೆಗೆದರು ಗಾಂಧೀಜಿ ಅವರು ಬರೆದ ಕಾಗದದ ಅವರ ಸ್ವಹಸ್ತಾಕ್ಷರದ ಕರಡು ಪ್ರತಿಯೊಂದರ ಕೆಲವು ಮಾತುಗಳನ್ನು ಕೆಳಗೆ ಕೊಟ್ಟಿದೆ.

"ಬೀದರಿನ ಘಟನೆಗಳು ಕಣ್ಣಿರಿಡುವಂಥವು ಸಂಸ್ಥಾನದಲ್ಲಿ ಕೆಲವು ಕಾಲದಿಂದ ಏನು ನಡೆಯುತ್ತಿದೆಯೋ ಅದಕ್ಕೆ ಕಳಶ ಇದ್ದ ಹಾಗೆ ಇದೆ ಇದು. ಸಂಸ್ಥಾನದಲ್ಲಿ ಪ್ರಾಣಕ್ಕಾಗಲಿ ಆಸ್ತಿಗಾಗಲಿ ಸುರಕ್ಷೆ ಇಲ್ಲ. ಕೇವಲ ಗುಲಾಮರಾಗಿ ನಡೆದುಕೊಂಡವರಿಗೆ ಮಾತ್ರ ಸುರಕ್ಷೆ ಬೀದರಿನ ಬಗ್ಗೆ ಅವರು ಹೊರಡಿಸಿರುವ ಸುದ್ದಿ ಪತ್ರ"ಅಲ್ಲಿ ನ್ಯಾಯ ಸಿಗುತ್ತದೆ ಎಂಬ ಆಸೆಯನ್ನು ದ್ವಂಸಮಾಡಿದೆ.

ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಮತ್ತಿಷ್ಟು ಬಲಗೊಳಿಸಿದೆ. ಆ ಬೇಡಿಕೆ ದುರ್ಗಮವಾಗಿದೆ. ಆದರೆ ಪ್ರತಿಯೊಬ್ಬ ಶಿಷ್ಟ ಪೌರನ ತುರ್ತಿನ ಉದ್ದೇಶ ತನ್ನ ಕೈಲಾದುದೆಲ್ಲವನ್ನು ಮಾಡಿ ಇದಕ್ಕೆ ಪರಿಹಾರ ಗಳಸಿ ಮತ್ತೊಮ್ಮೆ ಬೀದರನಂಥ ಘಟನೆ ನಡೆಯದಂತೆ ಮಾಡುವುದಾಗಿದೆ.

**ರಜಾಕಾರರ ಹಾವಳಿಯಿಂದ ಇನ್ನೊಂದು ಭೀಕರ ಘನೆಯಂದರೆ "ವಿಷಕೊಟ್ಟು ಜೈಲಿನಲ್ಲಿ ಭಾಯೀ ಶ್ಯಾಮಲಾರ ಕೊಲೆ"[೪]**

ಭಾಯೀ ಶ್ಯಾಮಲಾಲ ಮತ್ತು ಭಾಯೀ ಬನ್ಸಿಲಾಲ ಎಂಬ ಸಹೋದರರು ಈಗಿನ ಬೀದರ ಜಿಲ್ಲೆಯ ಹಳ್ಳಿಖೇಡ (ಬಿ) ಗ್ರಾಮದ ಆರ್ಯ ಸಮಾಜದವರಾಗಿದ್ದರು. ಶ್ಯಾಮಲಾಲರು ತಮ್ಮ ವಕೀಲ ವೃತ್ತಿಗಾಗಿ ಆಗ ಬೀದರ ಜಿಲ್ಲೆಯ ಒಂದು ತಾಲೂಕಾ ಪಟ್ಟಣವಾದ ಉದಗೀರದಲ್ಲಿ ವಾಸವಾಗಿದ್ದರು. ಇಬ್ಬರು ಸಹೋದರರು ಸಕ್ರಿಯವಾಗಿ ವಿಮೋಚನಾ ಚಳುವಳಿಯಲ್ಲಿ ದುಡಿಯುತ್ತಿದ್ದರು. ಶ್ಯಾಮಲಾಲನ ಮೇಲೆ ಮೊದಲಿನಿಂದಲೂ ರಜಾಕಾರರು ಒಂದು ಕಣ್ಣು ಇಟ್ಟುಕೊಂಡೆ ಇದ್ದರು ೧೯೩೮ರ ದಸರಾ ಹಬ್ಬದ ದಿನ ಬನ್ನಿ ಪೂಜೆಗೆ ಹಿಂದುಗಳ ಮೆರವಣಿಗೆ ಊರುದಾಟಿ ಹೊರಗೆ ನಡೆದಿತ್ತು. ಯಾರೋ ಕಿಡಿಗೇಡಿ, ಮುಸ್ಲಿಂಮನೊಬ್ಬನು. "ಊರಲ್ಲಿ ಹಿಂದು ಹೆಣ್ಣು ಮಕ್ಕಳ ಮೇಲೆ ಬಲತ್ಕಾರ ನಡೆದಿದೆ ಎಂದು ಸುಳ್ಳು ಸುದ್ದಿ ಹಬ್ಬಿಸಿದ."[೫] ಸುದ್ದಿ ತಿಳಿದದ್ದೇ ತಡ ಮೆರೆವಣಿಗಯಲ್ಲಿ ಕೋಲಾಹಲ ಪ್ರಾರಂಬವಾಯಿತು. ಸೀಮೋಲ್ಲಂಘನಕ್ಕೆ ಹೊರಟ್ಟಿದ್ದ ಹಿಂದೂಗಳ ಆವೇಶಕ್ಕೆ ಒಳಗಾಗಿ ಊರಿನ ಕಡೆಗೆ ಧಾವಿಸಿದರು. ನಿಜ ಪರಿಸ್ಥಿತಿ ಏನು ಎಂದು ತಿಳಿಯುವ ಮೊದಲೇ ಕಾದಾಟಕ್ಕೆ ಮೊದಲಾಯಿತು. ಒಂದೆರಡು ಹೆಣ ಬಿದ್ದವು. ಈ ಘಟನೆಯ ಹಿಂದೆ ಭಾಯೀ ಶ್ಯಾಮಲಾಲರ ಕೈವಾಡವಿದೆ ಎಂದು ರಜಾಕಾರರು ಆಪಾದಿಸಿದರು. ಶ್ಯಾಮಲಾಲರನ್ನು ಬಂಧಿಸಿ ದಾವೆ ಹೂಡಲಾಯಿತು. ಈ ಎಲ್ಲಾ ಷಡ್ಯಂತ್ರದ ಹಿಂದೆ ಮತಾಂಧರಾದ ಸೈಯದ್ ಬಾದಶಾಹ ಕಾದರಿ ಮತ್ತು ವಲೀವುದ್ದಿನ್ ಎನ್ನುವರ ಕೈವಾಡವಿತ್ತು.

ಯಾವುದೋ ಒಂದು ಆರೋಪದ ಅಡಿಯಲ್ಲಿ ಶ್ಯಾಮಲಾಲರನ್ನು ಬಂಧಿಸಬೇಕಾಗಿತ್ತು. ಈ ಒಂದು ಘಟನೆಯಲ್ಲಿ ಅವರ ಮೇಲೆ ಸುಳ್ಳು ಆರೋಪ ಹೊರಿಸಲಾಯಿತು. ಸುಳ್ಳು ಸಾಕ್ಷಿಗಳನ್ನು ಹುಟ್ಟು ಹಾಕಿ ಅವರನ್ನು ಅಪರಾಧಿಯೆಂದು ಸಾಬೀತು ಪಡಿಸಲಾಯಿತು. ಬೀದರ ಜೈಲಿನಲ್ಲಿ ಅವರನ್ನು ಇಡಲಾಯಿತು. ಆಗ ಅವರ ಆರೋಗ್ಯ ಚೆನ್ನಾಗಿರಲಿಲ್ಲ. ಬರೀ ಹಾಲು ಹಣ್ಣು ಮಾತ್ರ ಕೊಡಬೇಕೆಂದು ಡಾಕ್ಟರರು ಹೇಳಿದ್ದರು. ಆದರೂ ಅಲ್ಲಿಯ ಜೇಲರನಾದ ಅಬು ಅಯೊಬನು ಇತರ ಸಾಮನ್ಯ ಕೈದಿಗಳಿಗೆ ಕೊಡುತ್ತಿದ್ದ ಹಸಿಬಿಸಿ ಬೆಂದ ರೊಟ್ಟಿಯನ್ನೆ ಕೊಡುತ್ತಿದ್ದನು. ಹೀಗಾಗಿ ಶ್ಯಾಮಲಾಲರ ಆರೋಗ್ಯ ಇನ್ನೊಂದಿಷ್ಟು ಹದಗೆಡುತ್ತ ಹೋಯಿತು. ಶ್ಯಾಮಲಾಲರು ನಿಜಾಮನಿಗೆ ಒಂದು ತಲೆನೋವಾಗಿದರೆಂಬುದು ಜೇಲರಿಗೆ ಗೊತ್ತಿತ್ತು.

ಆದ್ದರಿಂದ ಜೈಲನಲ್ಲಿಯೇ ಅವರನ್ನು ಮುಗಿಸಬೇಕೆಂದು ಯೋಚಿಸಿ ಒಂದು ದಿನ ಔಷದಿಕೊಡುವ ನೆಪದಲ್ಲಿ ಔಷದದಲ್ಲಿ ವಿಷ ಬೆರೆಸಿ ಕುಡಿಸಿದ ಇಡೀ ರಾತ್ರಿ ಅವರಿಗೆ ವಾಂತಿ ಭೇದಿಯಾಗಿ ಬೆಳಗಾಗುವದರಲ್ಲಿ ತಮ್ಮ ಬ್ಯಾರೇಕ್ಕಿನ್ಲಲಿ ಸತ್ತು ಬಿದ್ದಿದ್ದರು.

**ಬಸವಕಲ್ಯಾಣ ಮತ್ತು ಹುಮನಾಬಾದಗಳಲ್ಲಿ ಬಲಿ:**

ಭಾಯಿ ಬನ್ಸಿಲಾಲ ಮತ್ತು ಭಾಯಿ ಶ್ಯಾಮಲಾಲರು ಬೀದರ ಜಿಲ್ಲೆಯಾದ್ಯಂತ ಆರ್ಯ ಸಮಾಜದ ಚಳುವಳಿಯನ್ನು ಪ್ರಬಲಗೊಳಿಸಿದರು. ಚಿಟಗುಪ್ಪಾದಲ್ಲಿ ಹಕೀಕತರಾವ ದಶರಥರಾವ ಘಂಟೋಜಿ (ಮಹಿಂದ್ರಕರ) ರಾಮಚಂದ್ರ ಬೋಡಕೆ, ಬೀಮರಾವ ಪಟವರ್ಧನೆ ವಿಠ್ಠಲರಾವ ಕುಕಡಾಲ ಮುಂತಾದವರು 'ಮಾಡು ಇಲ್ಲವೆ ಮಡಿ', ಎಂಬಂಥ ಸಂಕಲ್ಪದಿಂದ ಹೋರಾಟಕ್ಕೆ ಇಳಿದಿದ್ದರು. ಬಸವಕಲ್ಯಾಣದಲ್ಲಿ ಪಂ. ಗೋಪಲದೇವ ಶಾಸ್ತ್ರಿ ಎರಡನೆಯ ಕರ್ನಾಟಕ ಪರಿಷತ್ತು ಬೀದರನಲ್ಲಿ ನಡೆಯಿತು. ಅಲ್ಲಿನ ಪರಿಷತ್ತುನ್ನು ಮುಗಿಸಿಕೊಂಡು ಹೋಗಿದ್ದವರು ಹೈದರಾಬಾದನ್ನು ತಲುಪುವ ಮೊದಲೇ ಬೀದರಿನ ಕೆಲವು ಭಾಗಗಳು ಅಗ್ನಿ ನಾರಾಯಣನಿಗೆ ಆಹುತಿಯಾದವು.

ಡಾ॥ ವಾಮನರಾವ ಏಳಣೂರಕರ ಹಾಗೂ ಅವರ ಪತ್ನಿ ಸರಳಬಾಯಿ ಉದಯಭಾನು ವಕೀಲರು ಹಾಗೂ ಅವರ ಪತ್ನಿ ಝುಂಪಾಬಾಯಿ ಮೋಹನಸಿಂಗ, ಗಂಗಾರಾಮ ಧರ್ಮ ಪ್ರಕಾಶ ಮುಂತಾದವರು ಮುಂಚೂಣಿಯಲ್ಲಿದ್ದರು ಧರ್ಮಪ್ರಕಾಶನನ್ನು ೨೪-೬-೧೯೩೮ ರಂದು ನಡುಬೀದಿಯಲ್ಲಿ ಕೊಲೆ ಮಾಡಲಾಯಿತು.

ಹುಮನಾಬಾದಿನಲ್ಲಿ ಕ್ರಾಂತಿಯ ಕಹಳೆಯನ್ನು ಊದಿದವರೆಂದರೆ ಪಂಡಿತ ಶಿವಚಂದ್ರ ಇವರ ವ್ಯಕ್ತಿತ್ವ ಆಕರ್ಷಕವಾಗಿತ್ತು. ಮಾತು ಕಡಿಮೆ ಯಾದರು ಆಡಿದ್ದೆಲ್ಲಾ ಕಲ್ಲಿನ ಮೇಲೆ ಕೊರೆದ ಗೆರೆಯಂತೆ ಅಟಲ ಇವರ ಸಾತ್ವಿಕ ಬದುಕಿಗೆ ಮಾರು ಹೋಗಿ ನೂರಾರು ಜನರು ತಮ್ಮ ದುರ್ವ್ಯಸನಗಳನ್ನು ತೊರೆದು ಸಾತ್ವಿಕರಾಗಿ ಬಾಳಿದ ಅನೇಕ ಉದಾಹರಣೆಗಳು ಈಗಲೂ ಸಿಗುತ್ತವೆ.

ಶಿವಚಂದ್ರರು ಮೊದಲಿಗೆ ಪ್ರಾರಂಭಿಸಿದ್ದುದು. ಹಿಂದುಗಳಲ್ಲಿ ಧಾರ್ಮಿಕ ಮತ್ತು ಸಮಾಜಿಕ ಸುಧಾರಣೆಗಳು ಮತ್ತು ಕುರುಡು ನಂಬಿಕೆಗಳನ್ನು ಹೊಡೆದೊಡಿಸುವುದು ಇದೆಲ್ಲಾ ರಜಾಕಾರರಿಗೆ ಸರಿಬರುತ್ತಿರಲಿಲ್ಲ. ಯಾಕೆಂದರೆ ಹಿಂದುಗಳಲ್ಲಿ ಬೌದ್ಧಿಕ ಜಾಗೃತಿ ಉಂಟಾಗುವುದು. ಅವರಿಗೆ ಬೇಕಾಗಿರಲಿಲ್ಲ. ಹಿಂದೂಗಳು ಮೂಢರಾಗಿದ್ದಾರೆ. ದೀನರಾದ ಸಿದ್ದಿಕಿಯಂಥವರು ಮಂತಾತರದ ಕೆಲಸದಲ್ಲಿ ಸುಲಭವಾಗಿ ತೊಡಗಬಹುದು ಎಂದು ಅವರ ನಂಬಿಕೆಯಾಗಿತ್ತು. ಆದ್ದರಿಂದ ರಜಾಕಾರರು ಶಿವಚಂದ್ರರ ಕೊಲೆ ಮಾಡಲು ಅನೇಕ ಸಲ ಪ್ರಯತ್ನಿಸಿ ವಿಫಲರಾಗಿದ್ದರು. ೧೯೪೨ರ ಹೋಳಿ ಹಬ್ಬದ ದಿನ ಆರ್ಯ ಸಮಾಜ ಶಿವಚಂದ್ರರು ಹತ್ತಿಪ್ಪತ್ತು ಜನ ಸಂಗಡಿಗರೊಂದಿಗೆ –

– ಮೆರವಣಿಗೆ ಹೊರಟ್ಟಿದ್ದರು. ಹೋಳಿಹಬ್ಬವೆಂದರೆ ಬೈಗಳ ಅಶ್ಲೀಲ ವರ್ತನೆಯ ಮತ್ತು ಬಣ್ಣ ಹಾಕಿಕೊಂಡು ಕುಣಿಯುವ ಒಂದು ರಾಕ್ಷಸಿ ಹಬ್ಬವಾಗಿತ್ತು ಅದೆಲ್ಲ ತಪ್ಪು ಹಾಗೆಲ್ಲ ಹೋಳಿ ಆಚರಿಸಬಾರದು ಎಂದು ಪ್ರಚಾರ ಮಾಡುವುದೇ ಆರ್ಯ ಸಮಾಜದ ಮೆರವಣಿಗೆಯ ಉದ್ದೇಶವಾಗಿತ್ತು.

ಆದರೆ ಆ ದಿನ ಇವರ ಮೆರವಣಿಗೆ ಹೊರಡುತ್ತಿದ್ದಂತೆ ಎದುರಿನಿಂದ ಸುಮಾರು ೧೫೦ ಜನರ ರಜಾಕಾರರು ಶಸ್ತ್ರಾಸ್ತ್ರಗಳನ್ನು ಹಿಡಿದುಕೊಂಡು ಬಂದರು. ಮೆರವಣಿಗೆಕಾರರು ನಿಃಶಸ್ತ್ರರಾಗಿದ್ದರು. ರಜಾಕಾರರು ಒಂದೇ ಸವನೇ ಗುಂಡು ಹಾರಿಸಲು ಪ್ರಾರಂಭಿಸಿದರು. ಶಿವಚಂದ್ರರು ಬಲವಂತವಾಗಿ ತಮ್ಮಲ್ಲೆ ಸಂಗಡಿಗರನ್ನು ಅಲ್ಲಿಂದ ಓಡಿಹೋಗಲು ಹೇಳಿ ತಾವುಬ್ಬರೇ ರಜಾಕಾರರೆದುರಿಗೆ ನಡೆದರು. ಅವರೊಬ್ಬರನ್ನೆ ಬಿಟ್ಟು ಹೋಗಲು ಯಾರು ಸಿದ್ದರಿರಲಿಲ್ಲ. ಆದರೂ ಶಿವಚಂದ್ರರು ಕಠೋರ ಧ್ವನಿಯಲ್ಲಿ ಅವರನ್ನೆಲ್ಲಾ ಹಿಂದಕ್ಕೆ ಕಳುಹಿಸಿದರು. ಸಂಗಡಿಗರೆಲ್ಲಾ ಹಿಂದೆಸರಿಯುತ್ತಿದ್ದಂತೆ ರಜಾಕಾರರು ಶಿವಚಂದ್ರರ ಎದೆಗೆ ಎರಡು ಮೂರು ಸುತ್ತು ಗುಂಡು ಹಾರಿಸಿದರು. ಶಿವಚಂದ್ರರು ನೆಲಕ್ಕೆ ಉರುಳುತ್ತಿದ್ದಂತೆ ಇನ್ನೂ ಮೂರು ಸಂಗಡಿಗರು ಅಲ್ಲಿ ರಜಾಕಾರರ ಗುಂಡಿಗೆ ಬಲಿಯಾದರು.

**ಗೋರ್ಟಾ ಗ್ರಾಮ ಬೇಚಿರಾಗದ (ದೀಪಾ ಹಚ್ಚುವವರು ಇಲ್ಲದ ದಾರಿಯಲ್ಲಿ):**

ನಾದಿರ್ ಶಾಹನು ದಿಲ್ಲಿಯ ಮೇಲೆ ದಾಳಿ ಮಾಡಿದಾಗ ನರಸಂಹಾರದ ಆದೇಶ ಕೊಟ್ಟಿದ್ದನಂತೆ ಎದುರಿಗೆ ಕಂಡವರನ್ನೆಲ್ಲಾ ಸಂಹರಿಸುತ್ತಾ ಹೋಗುವುದೇ ಆತನ ಸೈನಿಕರ ಕೆಲಸವಾಗಿತ್ತಂತೆ. ಆಗ ಹೊರಗೆ ಕಾಣಿಸಿಕೊಳ್ಳುವ ಗುಂಡಿಗೆ ಯಾರಿಗೂ ಇಲ್ಲವಾಗಿತಂತೆ, ಅಂಥಹ ಸಂದರ್ಭದಲ್ಲಿ ಒಬ್ಬ ಶಾಯರನು 'ನಿನ್ನ ಪ್ರೀತಿಯ ಕತ್ತಿಯು ಇಲ್ಲಿ ಯಾರನ್ನು ಜೀವಂತವಾಗಿ ಉಳಿಸಿಲ್ಲಾ ಈಗ ಈ ಸತ್ತವರೆಲ್ಲಾ ಜೀವ ತುಂಬಿ ನಿನ್ನ ಮಾರಣ ಹೋಮವನ್ನು ಮುಂದುವರಿಸು'.[೭]

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಗೋರ್ಟಾ ಎಂಬ ಗ್ರಾಮದಲ್ಲಿ ನರಸಂಹಾರದ ಘಟನೆ ನಾದಿರ್ ಶಾಹನ ನರಸಂಹಾರವನ್ನು ನೆನಪಿಗೆ ತರುತ್ತದೆ. ರಜಾಕಾರರು ಆ ಗ್ರಾಮದಲ್ಲಿ ಸಂಹಾರ ಮಾಡುತ್ತಾ ಹೋಗಿ ಕೊನೆಗೆ ಎಂಥಹ ಪರಿಸ್ಥಿತಿ ಬಂತೆಂದರೇ ಅವನ ಸಂಹಾರಕ್ಕೆ ಬಲಿಯಾಗಲು ಊರಲ್ಲಿ ಒಬ್ಬರು ಉಳಿದಿರಲಿಲ್ಲ. ರಜಾಕಾರರ ಸೈತಾನಿ ಕಥೆಯನ್ನು ಹೇಳಲು ಇಡೀ ರಿಯಾಸತ್ತಿನ ಕಥೆಯನ್ನು ಒಂದು ಕಡೆಗಿಟ್ಟು ಗೋರ್ಟಾದ ಕಥೆಯನ್ನು ಇನ್ನೊಂದು ಕಡೆಗೆ ಇಟ್ಟು ನೋಡಿದರೆ. ಮನುಷ್ಯ ಹೃದಯವುಳ್ಳಂಥ ಯಾರಿಗಾದರೂ ದಿಕ್ಕು ತಪ್ಪಬಹುದು.

ಗೋರ್ಟಾದ ಮೇಲೆ ರಜಕಾರರು ದಾಳಿ ಮಾಡಿದ್ದು ೯ನೇ ಮೇ ೧೯೪೮ರಂದು (ಇದನ್ನು ಕೆ. ಎಂ. ಮುನ್ಸಿಯವರು ೧೦ನೇ ಮೇ ಎಂದು ನಮೂದಿಸಿದ್ದಾರೆ) ಆ ದಿನ ಮಹಾದೇವಪ್ಪಾ ಡುಮಣೆಯವರ ಮನೆಯಲ್ಲಿ ೮೦೦ ಜನ ವಿಮೋಚನಾ ಚಳುವಳಿಯ ಜನರು ಆಶ್ರಯ ಪಡೆದಿದ್ದರು ಎಂದು ತಿಳಿದು ಬರುತ್ತದೆ. ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಒಂದೇ ಕಡೆಗೆ ರಜಾಕಾರರಿಗೆ ಬೇಟೆಗಳು ಎಲ್ಲಿ ಸಿಕ್ಕಾವು? ಅದಕ್ಕಾಗಿ ಅವರು ಗೋರ್ಟಾವನ್ನು ತಮ್ಮ ದಾಳಿಗೆ ಕೇಂದ್ರವನ್ನಾಗಿ ಆರಿಸಿಕೊಂಡಿದ್ದರು. ಆ ದಿನ ಮುಂಜಾನೆ ೮ ಗಂಟೆಗೆ ಸುಮಾರು ೨೦೦ ಜನ ರಜಾಕಾರರು ಗೋರ್ಟಾ ಗ್ರಾಮದ ಮೇಲೆ ದಾಳಿ ಮಾಡಿದರು. ಇಸಾಮೋದ್ದಿನ್ ಕೊಲೆಯ ಸೇಡು ತಿರಿಸಿಕೊಳ್ಳಲು ಬಂದಿದ್ದ ಈ ರಜಾಕಾರರ ತಂಡದ ನಾಯಕತ್ವವನ್ನು ಇಸಾಮೊದ್ದಿನನ್ ಅಣ್ಣನಾದ ಚಾಂದ ಪಟೆಲನು ವಹಿಸಿಕೊಂಡಿದ್ದನು. ಗ್ರಾಮಕ್ಕೆ ನುಗ್ಗಿದ್ದವರೇ ಸಿಕ್ಕ ಸಿಕ್ಕ ಮನೆಗಳಿಗೆ ನುಗ್ಗಿ ಜನರನ್ನು ಹಿಂಸೆ ಮಾಡುವುದ ಲೂಟಿ ಮಾಡುವುದನ್ನು ಪ್ರಾರಂಭಿಸಿದರು. ರಜಾಕಾರರ ಸೈತಾನಿ ಕೃತ್ಯ ಕಣ್ಣಿಗೆ ರಾಚಿತು. ರಜಾಕಾರರು ಎಷ್ಟೆ ಒದ್ದಾಡಿದರೂ ಡುಮಣೆಯವರ ಮನೆಯ ಒಂದು ಕಲ್ಲು ಕೂಡಾ ಕೊಂಕಿಸಲು ಸಾದ್ಯವಿರಲಿಲ್ಲ. ೨೫೦೦ ಜನ ಸಂಖ್ಯೆಯ ಸುಮಾರು ೪೦೦ ಮನೆಗಳಿರುವ ಆ ಗ್ರಾಮಕ್ಕೆ ೨೦೦ ಜನ ರಜಾಕಾರರ ದಂಡು ಬಹಳ ಭಾರಿಯೇ ಯಾಗಿತ್ತು. ರಜಾಕಾರರು ಮುಸ್ಲಿಮರ ಹಾಗು ದಲಿತರ ಮನೆಗಳಿಗೆ ಕೈ ಹಚ್ಚಿರಲಿಲ್ಲ. ಹಿಂದುಗಳ ಒಂದೊಂದು ಮನೆಗೆ ನುಗ್ಗುವುದು ಕೈಗೆ ಸಿಕ್ಕಿದ್ದೆಲ್ಲಾ ಲೂಟಿ ಮಾಡುವುದು ಮೊದಲು ಗಂಡಸರನ್ನು ಎಳೆದು ಹೋರಗೆ ತರುವುದು. ಹೆಂಗಸರೇನಾದರೂ ಅಡ್ಡಿ ಪಡಿಸಿದರೆ ಅವರನ್ನು ಎಳೆದು ತರುವುದು ಆ ಮೇಲೆ ಬೀದಿಯಲ್ಲಿ ಹೆಣ ಹಾಕುವುದು ಅವರ ಕೆಲಸವಾಗಿತ್ತು.

ಈ ಹತ್ಯಾಕಾಂಡದಲ್ಲಿ ಕೊಲೆಯಾದವರ ಹೆಣಗಳನ್ನು ಎಲ್ಲೆಂದರಲ್ಲಿ ಬಣಿವೆಗಳಲ್ಲಿ ಬರಣಿಯ ರಾಶಿ (ಕುಳಬಾನ) ಮನೆಗಳಲ್ಲಿ ಹಾಕಿ ರಜಾಕಾರರೇ ಸುಟ್ಟರು ಯಾವ ಹೆಣ ಯಾರದು ಎಂದು ಗುರುತಿಸಲು ಸಾಧ್ಯವೇ ಇಲ್ಲದಂತಹ ಪರಿಸ್ಥಿತಿ ಅದಾಗಿತ್ತು. ಈ ಘಟನೆ ಇಡೀ ಹೈದ್ರಾಬಾದ ಕರ್ನಾಟಕದಲ್ಲಿಯೇ ನಡೆದ ಒಂದು ಭಯಾನಕ ಘಟನೆಯಾಗಿದೆ.

## ಔರಾದದಲ್ಲಿ ಹೋಳಿಕಾಂಡ:

೨೩ನೇ ಮೇ ೧೯೪೧ರಂದು ಬೀದರ ಜಿಲ್ಲೆಯ ಔರದನಲ್ಲಿ ಖಾಸಿಂ ರಜ್ವಿಯ ಭಾಷಣ ಏರ್ಪಡಿಸಲಾಗಿತ್ತು. ಆ ದಿನ ಆತ ಮಾಡಿದ ಭಾಷಣದ ಸಾರಾಂಶ 'ಸ್ವತಂತ್ರ ಹೈದ್ರಾಬಾದಿನಲ್ಲಿರುವ ಕಾಫಿರರೇ! ನೀವು ಇರಲು ಬಯಸುವುದಾದರೇ ಇಸ್ಲಾಮಿ ಶಾಸನಕ್ಕೆ ಅನುಗುಣವಾಗಿ ಇರತಕ್ಕದ್ದು, ಇಲ್ಲವಾದರೇ ಹೈದ್ರಾಬಾದ ಬಿಟ್ಟು ಹೋಗತಕ್ಕದ್ದು. ಇಲ್ಲಿ ಕೇವಲ ಮುಸಲ್ಮಾನೀ ಕಾಯಿದೆ ಕಾನೂನುಗಳು ನಡೆಯುತ್ತವೆ.

"ಸ್ವತಂತ್ರ ಹೈದರಾಬಾದನ್ನು ವಿರೋಧಿಸುವುವರನ್ನು ನನ್ನ ರಜಾಕಾರರು ಕಡಿದು ಹಾಕುತ್ತಾರೆ. ಆರ್ಯ ಸಮಾಜದವರು ಮತ್ತು ಕಾಂಗ್ರೇಸ್ಸಿನವರು ರಿಯಾಸತ್ತಿನ ಪರಿಸ್ಥಿತಿಯನ್ನು ಕೆಡಿಸಿಬಿಟ್ಟಿದ್ದಾರೆ. ಅವರಿಗೆ ತಕ್ಕ ಪಾಠ ಕಲಿಸುತ್ತೇವೆ. ತಪ್ಪಿದ್ದಲ್ಲಿ ಅವರು ಮುಸಲ್ಮಾನರಾಗಿ ರಿಯಾಸತ್ತಿನಲ್ಲಿ ಇರಬೇಕು. ಇಲ್ಲವೇ ಸಾಯಲು ಸಿದ್ದರಾಗಬೇಕು.'[೮] ಎನ್ನುವ ಉದ್ರೇಕಕಾರಿ ಭಾಷಣ ಮಾಡಿದನು. ಈ ಭಾಷಣವು ರಜಾಕಾರರ ಮೇಲೆ ಅಗಾಧವಾದ ಪರಿಣಾಮ ಬೀರಿತು.

ಕಾಸಿಂ ರಜ್ವಿಯ ಭಾಷಣದ ಪರಿಣಾಮ ರಜಾಕಾರರ ಮೇಲೆ ಧಿಡಿರನೇ ಆಯಿತು. ಮರು ದಿನ ೨೪/೦೫/೧೯೪೮ರಂದು ಬೆಳಗಾಗುತ್ತಿದ್ದಂತೆ ರಜಾಕಾರರು ಹಿಂದುಗಳ ಅಂಗಡಿಗಳ ಮತ್ತು ಮನೆಗಳ ಮೇಲು ದಾಳಿ ಮಾಡಲು ಪ್ರಾರಂಭಿಸಿದರು. ಅಂಗಡಿ ಮನೆಗಳನ್ನು ಲೂಟಿ ಮಾಡಿ ಬೆಂಕಿ ಹಚ್ಚಲು ಶುರು ಮಾಡಿದರು. ಹಿಂದಿನ ದಿನ ರಜ್ವಿಯ ಪ್ರಚೋಧನಕಾರಿ ಭಾಷಣದಿಂದಲೇ ಆ ಕಾಂಗ್ರೇಸ್ ಮತ್ತು ಆರ್ಯ ಸಮಾಜದ ಕಾರ್ಯಕರ್ತರಿಗೆ ರಜಾಕಾರರ ಮುಂದಿನ ಕ್ರಮ ಏನಾಗಬಹುದು ಎಂಬುದುರ ಕಲ್ಪನೆ ಬಂದಿತ್ತು. ರಾತ್ರಿಯಲ್ಲಾ ಪ್ರತಿಭಟನೆಯ ತಯಾರಿಮಾಡಿಕೊಂಡಿದ್ದರು. ಆದರೆ ಅಷ್ಟು ಬೇಗ ರಜಾಕಾರರು ಎರಗಿ ಬೀಳುತ್ತಾರೆಂದು ಅನಿಸಿರಲಿಲ್ಲ. ಮರುದಿನವೇ ರಜಾಕಾರರು ಅನಿರೀಕ್ಷಿತವಾಗಿ ದಾಳಿ ಮಾಡಿದರು. ಅಂದರಿಂದ ಹೋರಾಟಗಾರಿಗೆ ಗಾಭರಿಯಾಗಿತ್ತು. ಆ ದಿನ ರಜಾಕಾರರ ದಂಗೆಯಲ್ಲಿ ವೆಂಕಟರಾವ ಆನಂದರಾವ ಭಂಡಾರೆ ಎನ್ನುವವರು ರಜಾಕಾರರ ಗುಂಡಿಗೆ ಬಲಿಯಾದರು. ಜನರು ಹೆದರಿ ಮನೆಗಳಲ್ಲಿ ಬಂದಿಯಾಗಿ ಕುಳಿತರು. ಆಗ ಪಂ. ವೀರಭದ್ರಲಿಂಗಪ್ಪ ಆರ್ಯರು ಪೀಸ್ತೂಲು ಕರಾಬಿನ್ನು ಹಿಡಿದು ರಜಾಕಾರರೊಂದಿಗೆ ಮುಖಾಮುಖಿ ಹೋರಾಟಕ್ಕಿಳಿದರು. ಆ ಕಡೆ ರಜಾಕಾರರು ಪಂ. ವೀರಭದ್ರ ಆರ್ಯರ ಮನೆಗೆ ಸೀಮೆ ಎಣ್ಣೆ ಸುರಿದು ಸುಟ್ಟು ಬಿಟ್ಟರು. ವೆಂಕಟರಾವ ಬಂಡಾರೆಯವರ ಹೆಣವನ್ನು ಪೇಟೆಗೆ ಹೊತ್ತು ತಂದು ಒಂದು ಅಂಗಡಿಯಲ್ಲಿ ಹಾಕಿ ಅಂಗಡಿಯ ಜೊತೆಗೆ ಹೆಣವನ್ನು ಸುಟ್ಟು ಬೂದಿ ಮಾಡಿದರು. ಇಂತಹ ಎಷ್ಟೊ ಹೆಣಗಳು ಆ ಕಿಚ್ಚಿನಲ್ಲಿ ಉರಿದು ಹೋದವು.

ಈ ರೀತಿಯಾಗಿ ಬೀದರಿನಲ್ಲಿ ಮತ್ತು ಬೀದರ ಜಿಲ್ಲೆಯಾದ್ಯಂತ ನಡೆದ ರಜಾಕಾರರ ಹಾವುಳಿಗಳು ಬೀದರ ತಾಲೂಕಿನ ಸಮಸ್ತ ಜನತೆಯಲ್ಲಿ ಈ ರಜಾಕಾರರ ಹಾವಳಿಗಳು ಜನರ ಮನಸ್ಸಿನ ಮೇಲೆ ಅಗಾಧವಾದ ಪರಿಣಾಮ ಬೀರಿದವು. ಹೀಗಾಗಿ ಬೀದರ ತಾಲೂಕಿನ ಜನತೆಯು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಲು ಪ್ರೇರೆಪಿಸಿತು. ಮುಂದಿನ ದಿನಗಳಲ್ಲಿ ಇಂತಹ ಹಾವಳಿಗಳು ಬೀದರನಲ್ಲಿ ನಡೆಯದಂತೆ ಜಾಗೃತಗೊಂಡು ರಾಷ್ಟ್ರೀಯ ಚಳುವಳಿಯಲ್ಲಿ ಹಲವಾರು ಹೋರಾಟಗಾರರು ಭಾಗವಹಿಸಿದರು.

## ಅಡಿ ಟಿಪ್ಪಣಿಗಳು:

೧. ಮಹಾಬಲೇಶ್ವರಪ್ಪಾ ಬಿ. ಸಿ. : ಹೈದರಾಬಾದ ಕರ್ನಾಟಕದ ರಾಜೀಕಿಯ ಚಳುವಳಿಗಳು ಪು – ೬೬

೨. ಅದೇ ಪು – ೬೭

೩. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ಕರ್ನಾಟಕ ಸಾಂಸ್ಕೃತಿಕ ಪರಂಪರೆ ಪು – ೫೧೨, ೫೧೩

೪. ಬಾಲಚಂದ್ರ ಜಯಶೆಟ್ಟಿ ಹೈದ್ರಾಬಾದ ಕರ್ನಾಟಕದ ವಿಮೋಚನಾ ಚಳುವಳಿ ಪು – ೫೯

೫. ಅದೇ ಪು – ೬೦

೬. ಅದೇ ಪು – ೬೮

೭. ಅದೇ ಪು – ೭೩

೮. ಅದೇ ಪು – ೭೨

## ಅಧ್ಯಾಯ – ೬

# ಪೋಲಿಸ ಕಾರ್ಯಾಚರಣೆ

೧೯೪೭ ರ ಉತ್ತರಾರ್ಧ ಮತ್ತು ೧೯೪೮ರ ಆರಂಭದ ಕಾಲದಲ್ಲಿ ವಲ್ಲಭಾಯಿ ಪಟೇಲ ದೇಶದ ಉದ್ದಗಲಕ್ಕೂ ಹರಡಿದ್ದ, ಮಹಾರಾಜರುಗಳು ಆಳ್ವಿಕೆಯಲ್ಲಿದ್ದ ಸಂಸ್ಥಾನಗಳನ್ನು ಕ್ರಮವಾಗಿ ಭಾರತದ ಅಧಿಪತ್ಯಕ್ಕೆ ಸೇರ್ಪಡೆಗೊಳಿಸಿದುದು ಸುವಿದಿತ. ವಿಶೇಷ ಸಮಸ್ಯೆಗಳನ್ನೊಡ್ಡಿ ಹೊರಗುಳಿದಿದ್ದವು. ಮೂರು ಪ್ರದೇಶಗಳು, ಕಾಶ್ಮೀರ, ಜುನಾಗಡ, ಹೈದರಾಬಾದ, ಕಾಶ್ಮೀರ ವ್ಯವಹಾರವನ್ನು ಪಂಡಿತ ಜವಾಹರಲಾಲ್ ನೆಹರು ತಾವೆ ವಹಿಸಿಕೊಂಡು ಅದನ್ನು ಪೂರ್ಣವಾಗಿಸಿದುದು ಒಂದು ದುರಂತ ಪ್ರಕರಣ. "ಸೌರಾಷ್ಟ್ರದಲ್ಲಿದ್ದ ಜುನಾಗಢದ ದಿವಾನ ಲೀಗಿನ ಶಾಹನವಾಜ್ ಭೂಟ್ಟೋ ಜುನಾಗಢ ಪಾಕಿಸ್ತಾನಕ್ಕೆ ಸೇರಲು ಇಚ್ಛಿಸುತ್ತದೆ, ಎಂದು ಪಾಕಿಸ್ತಾನಕ್ಕೆ ಪತ್ರ ಬರೆದ".[೧] ಅದರ ತಾರ್ಕಿಕತೆ, ಹಾಗೂ ಹೈದರಾಬಾದಿನ ನಿಜಾಮನ ಪ್ರತ್ಯೇಕತಾ ಪ್ರವೃತ್ತಿಗೆ ಕುಮ್ಮಕ್ಕು ನೀಡೀತೆಂಬ ಸಂಭವ ಈ ಎರಡು ಕಾರಣಗಳಿಂದ ಪಟೇಲ ೧೯೪೭ ರ ಅಕ್ಟೋಬರ – ನವಂಬರ ತಿಂಗಳಲ್ಲಿ ಜುನಾಗಡ ಬಾಗಿಲಿಗೆ ಸೇನೆಯನ್ನು ಕಳಿಹಿಸಿದರು. ಆದರೆ ಸೇನಾಚರಣೆಯ ಅಗತ್ಯವೇ ಬೀಳಲಿಲ್ಲ; ಹಿಂದಿನ ದಿನವೇ ಭೂಟ್ಟೋ ಕರಾಚಿಗೆ ಪಲಾಯನ ಮಾಡಿದ್ದ. ಉತ್ತರೋತ್ತರ ೧೯೪೮ರ ಫೆಬ್ರುವರಿ ೨೦ ರಂದು ವಿದ್ಯುಕ್ತವಾಗಿ ಪಡೆದ ಪ್ರಜಾಭಿಪ್ರಾಯ ಸಂಗ್ರಹದಲ್ಲಿ ಅಲ್ಲಿಯ ಜನತೆ ಅತ್ಯದಿಕ ಬಹುಮತದಿಂದ ಭಾರತದೂಡನೆ ವಿಲೀನವನ್ನು ಅನುಮೋದಿಸಿತು.

ಹೈದರಾಬಾದ ಇಡೀ ದೇಶದಲ್ಲಿಯೇ ಅತಿದೊಡ್ಡ ಸಂಸ್ಥಾನವಾಗಿತ್ತು. ೮೨,೦೦೦ ಚದರ ಮೈಲಿಯಷ್ಟು; ಶೇ ೮೫ರಷ್ಟು ಹಿಂದುಗಳಿದ್ದ ಅಲ್ಲಿಯ ಒಟ್ಟು ಜನಸಂಖ್ಯೆ ೧ ಕೋಟಿ ೬೦ ಲಕ್ಷದಷ್ಟಿತ್ತು. ಮಿಕ್ಕೆಲ್ಲ ಸಸ್ಥಾನಗಳ ಸೇರ್ಪಡೆಯಾದ ಮೇಲೆ ಹೈದರಾಬಾದಿಗೆ ಗಮನ ಕೂಡಲು ನಿಶ್ಚಯಿಸಿದರು. ಇದಕ್ಕೆ ಹಲವು ಕಾರಣಗಳಿದ್ದವು. ನೆಹರುರಿಗೆ ಕಾಶ್ಮಿರದ ಮೋಹವಿದ್ದಂತೆ ಮೌಂಟ ಬ್ಯಾಟನನಿಗೆ ಹೈದರಾಬಾದಿನ ಬಗ್ಗೆ ಮೋಹವಿತ್ತು. ಹಿಂದೆ ಇಂಗ್ಲೆಂಡಿನ ಸಾಮ್ರಾಟ ಮಿತ್ರನೆಂದು ಪರಿಗಣಿಸಿದ್ದ ನಿಜಾಮನ ಆಸಕ್ತಿಯ್ನನು ಕಾಯ್ದುಕೊಳ್ಳಲು ಶ್ರಮಿಸಿದೆ. ಅನಿವಾರ್ಯವಾಗಿ ಹೈದರಾಬಾದ ಸಂಸ್ಥಾನಕ್ಕೂ ಭಾರತಕ್ಕೆ ನಡುವೆ ಸಂಧಾನವಾಗಬೇಕಾದಲ್ಲಿ ಅದರ ರೂವಾರಿಯೆಂಬ ಕೀರ್ತಿ ನನಗೆ ಸಲ್ಲಲಿ ಎಂಬ ಅಕಾಂಕ್ಷೆ ಮೌಂಟಬ್ಯಾಟನದು. ನಿಜಾಮನು ಸೌಮ್ಯ ಮಾರ್ಗಕ್ಕೆ ಒಗ್ಗುವ ಸಂಬಂಧವಿಲ್ಲವೆಂದು ಗ್ರಹಿಸಿದರು ಪಟೇಲ ಮೌಂಟಬ್ಯಾಟನನ ಸಂತುಷ್ಟಿಗಾಗಿ ಹೈದರಾಬಾದ ಸರ್ಕಾರದೂಡನೆ ಒಂದು ತಾತ್ಕಾಲಿಕ 'ಯಥಾಸ್ಥಿತಿ ಒಪ್ಪಂದ' ಒಪ್ಪಿದರು. (೨೯–೧೧–೧೯೪೭)

ಪಾಕಿಸ್ತಾನಕ್ಕೆ ಸೇರುವುದಿಲ್ಲವೆಂದು ನಿಜಾಮನು ಆಶ್ವಾಸನೆ ಕೊಟ್ಟಮೇಲೆ ಹಿಂದಿದ್ದ ಆಡಳಿತ ವ್ಯವಸ್ಥೆಗಳ ಮುಂದುವರಿಕೆ ಒಪ್ಪಂದ ಮುಖ್ಯವಾಗಿತ್ತು. ಆ ಒಪ್ಪಂದದಂತೆಯೇ ಭಾರತದ ಸರ್ಕಾರ ಏಜೆಂಟ ಜನರಲ್ ಆಗಿ ಕೆ.ಎಂ. ಮುನ್ಷಿಯವರನ್ನು ಪಟೇಲ ನಿಯುಕ್ತಿ ಮಾಡಿ ಹೈದರಾಬಾದಿಗೆ ಕಳಿಸಿದರು.

ನಿಜಾಮನ ಸ್ವಾತಂತ್ರ್ಯಾಕಾಂಕ್ಷೆಗೆ ನೀರು ಗೊಬ್ಬರ ಒದಗಿಸುತ್ತಿದ್ದವನು ರಜಾಕಾರರ ನಾಯಕನೂ ಮುಸ್ಲಿಂ ಅಧಿಪತ್ಯಕ್ಕಾಗಿ ಸೆಣಸುತ್ತಿದ್ದ ಇತ್ತೆಹಾದ್ ಉಲ್ ಮುಸಿಲ್ಮೀನ್ ಸಂಘಟನೆಯ ಪ್ರಮುಖನೊ ಆಗಿದ್ದ ಕಾಸಿಂ ರಜ್ವಿ ೧೯೪೭ ನವೆಂಬರನಲ್ಲಿ ರಜ್ವಿ ದೆಹಲಿಗೆ ಹೋಗಿ ಪಟೇಲರನ್ನು ಬೇಟಿಯಾಗಿ "ಕಟ್ಟಕಡೆಯ ಮುಸ್ಲಿಂಮನಿರುವ ವರೆಗೆ ನಾವು ಭಾರತ ಒಕ್ಕೂಟ ವಿರುದ್ಧ ಯುದ್ಧ ಮಾಡುತ್ತೇವೆ. "ನೀವು ಆತ್ಮಹತ್ಯೆ ಮಾಡಿಕೊಳ್ಳಲು ನಿಶ್ಚಯಿಸಿದಲ್ಲಿ ನಾನು ಅದನ್ನು ಹೇಗೆ ನಿವಾರಿಸಲಿ"[೨] ಭಾರತದ ವಿರುದ್ಧ ಯುದ್ದ ನಡೆಸಲು ಪಾಕಿಸ್ತಾನದ ನೆರವಿಗೆ ನಿಜಾಮನು ರೂ ೨೦ ಕೋಟಿ ಸಾಲವಿತ್ತ. ನಿಜಾಮ ಸರ್ಕಾರದ ಪ್ರತಿನಿಧಿ ಲಯೀಕ್ ಅಲಿಗೆ ೧೯೪೮ರ ಏಪ್ರಿಲ ೧೬ರ ಭೇಟಿಯಲ್ಲಿ ಪಟೇಲ ಸ್ಪಷ್ಟಗೊಳಿಸಿದರು.

"ಇಷ್ಟು ದಿರ್ಘಕಾಲ ರಕ್ತಹರಿಸಿ ಶ್ರಮಿಸಿ ನಾವು ರಚಿಸಿರುವ ಒಕ್ಕೂಟದ ನಟ್ಟನಡುವೆ ಅದಕ್ಕೆ ಸೇರದ ಪ್ರತ್ಯೇಕ ಘಟಕವೊಂದು ಇರಲು ನಾವು ಅವಕಾಶ ಕೂಡಲಾರೆವು".[೩]

'ಯಥಾಸ್ಥಿತಿ ಒಪ್ಪಂದದ ಕರಾರುಗಳನ್ನು ನಿಜಾಮ ಸರಕಾರ ನಿರಂತರವಾಗಿ ಉಲ್ಲಂಘಿಸುತ್ತಲೇ ಹೋಯಿತು.'

ಭಾರತ ಸರ್ಕಾರ ಅಪೇಕ್ಷಿಸಿದಲ್ಲಿ ಅದರ ನಿರ್ದೇಶನದಂತೆ ರಕ್ಷಣೆ, ವಿದೇಶಾಂಗ ವ್ಯವಹಾರ, ಸಂಪರ್ಕ ಈ ಅಂಶಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ಬಯಸಿದ ಕಾನೂನುಗಳನ್ನು ನಿಜಾಂ ಸರಕಾರ ಜಾರಿಮಾಡಬೇಕು ಎಂಬ ಒಪ್ಪಂದಕ್ಕೆ ಪಟೇಲರ ಅರೆಮನಸ್ಸಿನ ಅನುಮೋದನೆಯನ್ನು ಮೌಂಟಬ್ಯಾಟನ ೧೯೪೮ರ ಜೂನ ೧೩ ರಂದು ಪಡೆದುಕೊಂಡ, ಆದರೆ ಈ ತಾತ್ಪೂರ್ತಿಕ ಕ್ರಮವನ್ನು ನಿಜಾಮ ಸರ್ಕಾರ ತಿರಸ್ಕರಿಸಿತು. ಇದನ್ನು ಪಟೇಲ ನೀರಕ್ಷಿಸಿಯೇ ಇದ್ದರು. ಹೈದರಾಬಾದಿನಲ್ಲಿ ಅನಿವಾರ್ಯವಾದಲ್ಲಿ ಮಿಲಿಟರಿ ಕಾರ್ಯಾಚರಣೆ ನಡೆಸಲು ಮೇ ತಿಂಗಳ ಮದ್ಯಭಾಗದಲ್ಲಿಯೇ ಸಚಿವ ಸಂಪುಟದ ಅಂಗೀಕಾರವನ್ನು ಪಟೇಲ ಪಡೆದುಕೊಂಡಿದ್ದರು. ಜವಾಹರಲಾಲರ ಅಸಮ್ಮತಿಯನ್ನು ಮೆಟ್ಟಿ,

ಜೂನ್ ೨೧ ರಂದು ಮೌಂಟ ಬ್ಯಾಟನ ನಿರ್ಗಮಿಸಿದ. ಆಗಿನಿಂದಲೇ ಹೈದರಾಬಾದ ಆಚರಣೆಯ ಅಂತಿಮ ಘಟ್ಟ ಆರಂಭವಾಯಿತೆನ್ನಬಹುದು. ಅನಧಿಕೃತ ರೀತಿಯಲ್ಲಿ ನಡೆದಿದ್ದ ಸರಕುಗಳ ದಿಗ್ಭಂದನ ಈಗ ಭಾರತ ಸರಕಾರದ ಘೋಷಿತ ನೀತಿಯಾಯಿತು.

ಏತನ್ಮಧ್ಯ ಹೈದರಾಬಾದಿನ ಜನಜೀವನ ಪೂರ್ತಿ ಅಸ್ತವ್ಯಸ್ತವಾಗಿತ್ತು. ನಡುರಾತ್ರಿಯಲ್ಲಿ ಪಾಕಿಸ್ತಾನಿ ವಿಮಾನಗಳು ಬಂದು ಬೀದರ, ವಾರಂಗಲ್ ಮುಂತಾದೆಡೆ ಇಳಿದು ರಜಾಕಾರರ ಪಡೆಗಳಿಗೆ ಯುದ್ಧ ಸಾಮಗ್ರಿಗಳನ್ನು ನೀಡಿ ವಾಪಸ್ಸಾಗುತ್ತಿದ್ದವು. ರಜಾಕಾರರು ಕಮ್ಯುನಿಷ್ಟರ ನಡುವೆ ದುಷ್ಟಕೂಟ ಏರ್ಪಟ್ಟು, ನಾಗರೀಕರ ಮೇಲಣ ಹಿಂಸಾತಂಡವ ಮುಗಿಲು ಮುಟ್ಟಿತು.

ನಿಜಾಮನು ವಿಶ್ವಸಂಸ್ಥೆಗೆ ದೂರನ್ನೊಯ್ದು, ಅಮೇರಿಕಾದ ಅಧ್ಯಕ್ಷರ ಮಧ್ಯ ಪ್ರವೇಶವನ್ನು ಬಯಸಿದ. ಅಮೇರಿಕಾ ನಿಕಾಕರಿಸಿತು. ಇವೆಲ್ಲಾ ನಡೆದಿದ್ದಾಗಲೂ ಜವಾಹರಲಾಲ ನೆಹರು ತಾವು ಮೌಂಟಬ್ಯಾಟನನಿಗೆ ಮಾತು ಕೊಟ್ಟಿದ್ದಂತೆ ಸೇನಾಚರಣೆಗೆ ಅನುಮತಿ ತಡೆ ಹಿಡಿದು ವಿಳಂಬ ನೀತಿ ಅನುಸರಿಸತೊಡಗಿದರು. ಆದರೆ ನೆಹರು ದೌರ್ಬಲ್ಯಗಳು ಆ ವೇಳೆಗೆ ರಹಸ್ಯವಾಗೇನು ಉಳಿದಿರಲಿಲ್ಲ. ಹೀಗೆ ಇಡೀ ಸಚಿವ ಸಂಪುಟವು "ಗವರ್ನರ್ ಜನರಲ್ ಸಿ.ರಾಜಗೋಪಾಲಚಾರಿಯವರು ಪಟೇಲರನ್ನು ಬೆಂಬಲಿಸಿದರು. ಸೇಪ್ಟೆಂಬರ ೮ ರ ಸಂಪುಟ ಸಭೆಯಲ್ಲಿಯೂ ನೆಹರು ಸೇನಾಚರಣೆಯನ್ನು ವಿರೋಧಿಸಿದರು."೪ ವಿರೋಧಿಸಿದವರು ಅವರೊಬ್ಬರು ಮಾತ್ರ.

ಸೆಪ್ಟೆಂಬರ ೧೩ ರಂದು ಸೇನಾಚರಣೆಯನ್ನು ಆರಂಭಿಸಲು ಸಂಪುಟದ ರಕ್ಷಣಾ ವ್ಯವಹಾರ ಸಮಿತಿ ನಿಶ್ಚಯಿಸಿತು. ಆ ಹಂತದಲ್ಲಿಯೂ 'ರಾಜಾಜಿಯವರು ನಿಜಾಮನಮನವೂಲಿಸಲಿ' ಎಂಬ ನೆಪವೂಡ್ಡಿ ನೆಹರು ಪ್ರತಿಬಂದಕ ಒಡ್ಡಿದರು. ಆದರೆ ಈ ಕಂಟಕಗಳನ್ನೆಲ ಪಟೇಲ ಚಾಣಾಕ್ಷತೆಯಿಂದ ಪರಿಹರಿಸಿಕೊಂಡರು.

'ಆಪರೇಶನ ಪೋಲೋ' ೧೯೪೮ ಸೆಪ್ಟೆಂಬರ ೧೩ರ ಬೆಳಗಿನ ಜಾವ ಆರಂಭವಾಯಿತು.'೫

ಏತನ್ಮಧ್ಯೆ ಪರಿಸ್ಥಿತಿ ದಿನೇ ದಿನೇ ಗಂಭೀರವಾಗುತ್ತಾ ನಡೆಯಿತು. ಯಥಾಸ್ಥಿತಿ ಒಪ್ಪಂದ ಉಲ್ಲಂಘನೆ ಹಾಗೂ ಗಡಿ ಭಾಗದಲ್ಲಿ ದಾಳಿಗಳು ಎರಡು ಪಕ್ಷಗಳಿಂದ ನಡೆಯುತ್ತಿದ್ದವು. ಸ್ವಾತಂತ್ರ್ಯಯೋದರು ತಮ್ಮ ಪ್ರಾಣವನ್ನು ಪಣಕಿಟ್ಟು ಗಡಿ ಚಳುವಳಿಯನ್ನು ತೀವ್ರಗಳಿಸಿದರು. ಈ ಸ್ವಾತಂತ್ರ್ಯಯೋಧರು ತಮ್ಮ ಪ್ರಾಣವನ್ನು ಪಣಕಿಟ್ಟು ಗಡಿ ಚಳುವಳಿಯನ್ನು ತೀವ್ರಗೊಳಸಿದರು. ಈ ಸ್ವಾತಂತ್ರ್ಯಯೋದರಲ್ಲಿ ಬೀದರ ತಾಲೂಕಿನ ಹಲವಾರು ಸ್ವಾತಂತ್ರ್ಯಯೋದರು ಭಾಗವಹಿಸಿದರು ಎಂಬುದನ್ನು ಈ ಅಧ್ಯಯನದಿಂದ ತಿಳಿದು ಕೊಳ್ಳಬಹುದಾಗಿದೆ. ಹೈದರಾಬಾದ ಸಂಸ್ಥಾನದ ರಾಜಕೀಯ ವಿವಾದವನ್ನು ಬಗೆಹರಿಸಲು ಭಾರತ ಸರ್ಕಾರವು ತಳೆದೆ ಔದಾಸೀನ ಮನೋಭಾವದಿಂದ ಬೇಸತ್ತು ಗಡಿ ಶಿಬಿರಗಳಲ್ಲಿ ಸ್ವರಾಜ್ಯಕ್ಕಾಗಿ ಹೋರಾಡುತ್ತಿದ್ದ, 'ಸ್ವಾತಂತ್ರ್ಯಯೋದರು ರಜಾಕಾರರನ್ನು ಪ್ರಚೋದಿಸಿ ಹಿಂದೂ ಮಹಿಳೆಯರ ಮೇಲಿನ ದೌರ್ಜನ್ಯವನ್ನು ತೀವ್ರಗೊಳಿಸಿದರು'೬ ಎಂಬ ಅಂಶ ನಮ್ಮ ಅಧ್ಯಯನದ ಸಂಧರ್ಭದಲ್ಲಿ ತಿಳಿಯಲಾಯಿತು.

ಹೈದರಾಬಾದ ರಾಜ್ಯದಲ್ಲಿದ್ದ ಅರಾಜಕತೆಯನ್ನು ಭಾರತ ಸರ್ಕಾರಕ್ಕೆ ಮನವರಿಕೆ ಮಾಡಿಕೊಡಲು ಇಂಥ ದುರದೃಷ್ಟಕರ ಕ್ರಮವು ಅಗತ್ಯವಾಗಿತ್ತು. ಕೇಂದ್ರ ಸರ್ಕಾರವು ನಿಜಾಮ ಸಾಮ್ರಾಜ್ಯವನ್ನು ಭಾರತದ ಒಕ್ಕೂಟದೊಳಗೆ ವಿಲೀನಗೊಳಿಸಲು ಪೋಲಿಸ ಕಾರ್ಯಾಚರಣೆ ಪ್ರಾರಂಭಿಸಲು ಬೇಕಾದ ರಾಜಕೀಯ ಪರಿಸ್ಥಿತಿಯನ್ನು ಸೃಷ್ಟಿಸಲು ಪ್ರಯತ್ನಿಸಲಾಯಿತು.

ಇದೇ ಸಂದರ್ಭದಲ್ಲಿ ೯-೯-೧೯೪೮ ರಂದು ಪ್ರದಾನ ಮಂತ್ರಿ ನೆಹರು ಕಾಮನವೆಲ್ತ ಅಧಿವೇಶನದಲ್ಲಿ ಪಾಲುಗೊಳ್ಳಲು ಲಂಡನಗೆ ಪ್ರಯಾಣ ಬೆಳೆಸಿದರು. ಈ ಕಡೆ ಅಪರಾಧಿಯನ್ನು ಶಿಕ್ಷಿಸಲು ಶಸ್ತ್ರಾಸ್ತ್ರಗಳನ್ನು ಬಳಸಲು ಸರದಾರ ಪಟೇಲ ನಿರ್ಧರಿಸಿದರು. ಪಂಡಿತ ನೆಹರೂರವರ ಔದಾಸೀನ್ಯ ಹಾಗು ಅನಿಶ್ಚಿತ ಮನೋಭಾವದ ಅರಿವಿದ್ದೂ ಸಹ ಸರದಾರ ವಲ್ಲಭಾಯ್ ಪಟೇಲರೂ ಹೈದರಾಬಾದ ಸಂಸ್ಥಾನದಲ್ಲಿದ್ದ ಗಂಭೀರ ಪರಿಸ್ಥಿತಿಯನ್ನು ಪರಿಗಣಿಸಿ ಅನಿವಾರ್ಯವಾಗಿ ೧೩-೦೯-೧೯೪೮ ರಂದು ಪೋಲಿಸ ಕಾರ್ಯಾಚರಣೆಗೆ ಆಜ್ಞೆ ನೀಡಿದರು. ಮೇಜರಲ ಜನರು ಜೆ.ಎನ್.ಚೌದರಿ ಹಾಗೂ ದಕ್ಷಿಣ ವಿಭಾಗದ ಸೇನಾ ಮುಖ್ಯಸ್ಥ ಲೆಪ್ಟಿನೆಂಟ ಜನರಲ್ ಮಹಾರಾಜ ಶ್ರೀ ರಾಜೇಂದ್ರ ಸಿನ್ಹಾಜೀಯವರುಗಳು ಭಾರತದ ಪಡೆಗಳ ನೇತೃತ್ವ ವಹಿಸಿದ್ದರು.

ಹೈದರಾಬಾದಿನ ಸಂಸ್ಥಾನವನ್ನು "ಭಾರತಿಯ ಪಡೆಗಳು ೧೨ ದಿಕ್ಕಿನಿಂದ ದಾಳಿ ನಡೆಸಿದವು. ಇವುಗಳಲ್ಲಿ ಔರಂಗಾಬಾದ ಗಡಿಯ ಮನಮಾಡ ಕಡೆಯಿಂದ. ಸೊಲ್ಲಾಪುರ ನಳದುರ್ಗ ಹಾಗೂ ನಂಜ್ ಕಡೆಯಿಂದ ಮದರಾಸು ಪ್ರಾಂತದ ಹೊಸಪೇಟ, ಮುನಿರಾಬಾದ ಕಡೆಯಿಂದ, ಬೊಂಬಾಯಿ ಪ್ರಾಂತದ ಗದಗ ಕಡೆಯಿಂದ, ನಡೆಸಿದ ದಾಳಿಗಳು, ತೀವ್ರವಾಗಿದ್ದವು' ಮತ್ತು ಪರಿಣಾಮಕಾರಿಯಾಗಿದ್ದವು."[೭] ಮುನಿರಾಬಾದನಲ್ಲಿ ನಿಜಾಮನ ಪಡೆ ಭಾರತೀಯ ಪಡೆಗಳ ನಡುವೆ ೧೪ ಮತ್ತು ೧೫ ಸೆಪ್ಟೆಂಬರ ೧೯೪೮ ರಂದು ಭೀಕರ ಕದನ ನಡೆಯಿತು. ರಜಾಕಾರರು, "ಛೋಟಾ ಪಾಕಿಸ್ತಾನ".[೮] ಎಂಬ ಹೆಸರಿನಿಂದ ಅಲ್ಲಿ ಬೃಹತ ಪ್ರಮಾಣದಲ್ಲಿ ಮದ್ದುಗುಂಡು ಶೇಖರಿಸಿಟ್ಟಿದ್ದರು. ಅಲ್ಲಿ ರಜಾಕಾರರ ಒಂದು ತುಕಡಿಯೇ ಇತ್ತು. ೧೬ನೇ ಸೇಪ್ಟೆಂಬರ ೧೯೪೮ ರಂದು ಆ ಮದ್ದಿನ ಉಗ್ರಾಣವನ್ನು ಗೊರ್ಖಾ ರೆಜಿಮೆಂಟ ಸ್ಫೋಟಿಸಿತು.

ಹೈದರಾಬಾದ ಸೈನ್ಯದಲ್ಲಿ ಗೊಂದಲ್ಲವೊ ಗೊಂದಲ ಅಧಿಕಾರಿಗಳಲ್ಲಿ ಸಮನ್ವಯವಿಲ್ಲದೆ ಒಬ್ಬೊಬ್ಬರು ಒಂದೊಂದು ತರಹ ಆಜ್ಞೆ ಕೊಡಹತ್ತಿದ್ದರು. ಯಾರ ಆಜ್ಞೆಗಳನ್ನು ಪಾಲಿಸಬೇಕೆಂದು ತಿಳಿಯದೆ ಸೈನಿಕರು ಕಂಗಾಲಾದರು.

ಹೈದರಾಬಾದ ಸೈನ್ಯದ ಕೆಲವು ಹಿರಿಯ ಅಧಿಕಾರಿಗಳು ತಮ್ಮ ಹುದ್ದೆಗಳನ್ನು ತ್ಯಜಿಸಿ ಹೋದರು. ಆದರೂ ಹೈದರಾಬಾದ ರೇಡಿಯೋ "ನಿಜಾಮರ ಸೈನಿಕರು ಭಾರತದ ಸೈನ್ಯವನ್ನು ಹಿಮ್ಮೆಟ್ಟಿಸುತ್ತಿದ್ದಾರೆ" ಎಂಬ ಸುಳ್ಳು ಸುದ್ದಿಗಳನ್ನು ಪ್ರಸಾರ ಮಾಡಿತು. "ರಜಕಾರರು ದೆಹಲಿಯನ್ನು ಆಕ್ರಮಿಸಿ ಕೆಂಪು ಕೋಟೆಯ ಮೇಲೆ ಆಸಿಫಿಯಾ ಧ್ವಜವನ್ನು ನೆಟ್ಟಿದ್ದಾರೆ".[೯] ಎಂಬ ಸಮಾಚಾರವನ್ನು ಬಿತ್ತರಿಸಿ ಜನರಿಗೆ ತಪ್ಪು ತಿಳುವಳಿಕೆ ಕೂಡುವ ಪ್ರಯತ್ನ ಮಾಡಲಾಯಿತು.

೧೭ನೇ ಸೆಪ್ಟೆಂಬರ ೧೯೪೮ ರಂದು ಲಿಯಾಕ್ ಅಲಿ ಸಚಿವ ಸಂಪುಟವು ತನ್ನ ರಾಜೀನಾಮ ನೀಡಿತು. ಎಲ್ಲಾ ರಾಷ್ಟೀಯ ನಾಯಕರುಗಳನ್ನು ಬಿಡುಗಡೆಗೊಳಿಸಲಾಯಿತು.

೧೯೪೮ ಸೇಪ್ಟೆಂಬರ ೧೭ರಂದು ನಿಜಾಮನು ರೇಡಿಯೋ ಭಾಷಣದ ಮೂಲಕ ತಾನು ಭಾರತ ಒಕ್ಕೂಟಕ್ಕೆ ಸೇರಿರುವುದಾಗಿ ಜನರಿಗೆ ತಿಳಿಸಿದ.

ಹೈದರಾಬಾದ ಪಡೆಗಳ ದಂಡನಾಯಕ ಮೇಜರ ಎಲ್ ಎಡ್ರೋಸ್‌ರವರು ೧೮ನೇ ಸೆಪ್ಟೆಂಬರ ೧೯೪೮ರಂದು ಸಂಜೆ ೫ ಗಂಟೆಗೆ ಭಾರತೀಯ ಪಡೆಗಳಿಗೆ ಶರಣಾದರು. ಹೈ ಸಂಸ್ಥಾನವನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸುವ ಒಡಂಬಡಿಕೆಗೆ ನಿಜಾಮನು ಸಹಿ ಹಾಕಿದನು.

"ಹಿಡಿಯಷ್ಟು ಮುಸ್ಲಿಂ ಯೋಧರು ಭಾರತವನ್ನು ಗೆದ್ದಿದ್ದಾರೆ. ಅವರು ಆಳುವ ಜನಾಂಗಕ್ಕೆ ಸೇರಿದವರು. ಅವರು ಕಾರ್ಯದಿಂದ ಹೋರಾಡುತ್ತಾ ಹುತಾತ್ಮರಾಗುತ್ತಾರೆಯೇ ಹೊರತಾಗಿ ಎಂದಿಗೂ ಶರಣಾಗತರಾಗುವುದಿಲ್ಲ"[೧೦] ಎಂದು ಜಂಬ ಕೊಚ್ಚಿಕೊಂಡಿದ್ದ ಕಾಸಿಂ ರಜ್ವಿ ಯನ್ನು ಸೆಪ್ಟೆಂಬರ್ ೧೯ ೧೯೪೮ರಂದು ಬಂಧಿಸಲಾಯಿತು. ಸಾವಿರಾರು ಹಿಂದೂಗಳ ಕೊಲೆಗೆ ಕಾರಣನಾಗಿದ್ದ ಸ್ತ್ರೀಯರ ಮಾನಾಪಹರಣವನ್ನು ಮಾಡಿದ್ದ ಮತ್ತು ಅಪರಿಮಿತ ಹಿಂಸಾಕೃತ್ಯಗಳಲ್ಲಿ ತೊಡಗಿದ್ದ ರಜ್ವಿಯನ್ನು ಸರಕಾರ ಅನುಕಂಪದಿಂದ ಕೇವಲ ೭ ವರ್ಷಗಳ ಶಿಕ್ಷೆವಿದಿಸಿ ಜೈಲಿಗೆ ಅಟ್ಟಿತು.

ಹೈದರಾಬಾದ ದುರಂತಕ್ಕೆ ನಿಜಾಮನೇ ಕಾರಣ ಸುಮಾರು ೩೭ ವರ್ಷಗಳ ಕಾಲ ಈ ಸಿಂಹಾಸನದಲ್ಲಿದ್ದರೂ ಮೈಸುರು ಮತ್ತು ಬರೋಡಾ ಸಂಸ್ಥಾನಗಳ ಮಹಾರಾಜರಂತೆ ಯಾವುದೇ ಪ್ರಜಾಹಿತ ಕಾರ್ಯ ಮಾಡಲಿಲ್ಲ. ಅಗಣಿತ ಸಂಪತ್ತನ್ನು ಶೇಖರಿಸಿಟ್ಟುಕೊಂಡು ಅದನ್ನು ಅಭಿವೃದ್ಧಿಕಾರ್ಯಗಳಿಗೆ ಉಪಯೋಗಿಸದೆ ತಾನು ದಾರಿದ್ರ್ಯದ ಜೀವನ ಸಾಗಿಸಿದ ನಿಜಾಮನು ಆದರ್ಶ ವ್ಯಕ್ತಿಯೇನು ಅಲ್ಲ.

ರಾಜ್ಯವನ್ನು ಇಸ್ಲಾಮೀಕರಣಗೊಳಿಸಬೇಕು ಜನರ ಸಮಾಜಿಕ ಸಾಂಸ್ಕೃತಿಕ ಹಾಗೂ ರಾಜಕೀಯ ಜೀವನದಲ್ಲಿ ಇಸ್ಲಾಂ ಅಧಿಷ್ಠಾನಗೊಳ್ಳಬೇಕೆಂಬುದೇ ಆತನ ಆಪೇಕ್ಷೆಯಾಗಿತ್ತು. ಧರ್ಮದ ಹೆಸರಿನಲ್ಲಿ ಕ್ರೂರವಾದ ರಾಜ ವ್ಯವಸ್ಥೆಯನ್ನು ಆತ ಪುರಸ್ಕರಿಸಿ ತನ್ನ ಅನುಯಾಯಿಗಳು ಅಮಾಯಕ ಹಿಂದು ಪ್ರಜೆಗಳ ಮೇಲೆ ಪೈಶಾಚಿಕ ಕೃತ್ಯಗಳನ್ನು ಎಸಗಿದನು. ಆ ಬರ್ಬರತೆಯನ್ನು ತಡೆಯಲಿಲ್ಲ. ಇಂಥಹ ವ್ಯಕ್ತಿಯನ್ನು ನೆಹರು ಸರಕಾರ ರಾಜಪ್ರಮುಖರನ್ನಾಗಿ ನೇಮಿಸಿದ್ದು ಮೆಚ್ಚಬಹುದಾದ ಸಂಗತಿಯೇನಲ್ಲ. ಈ ದೇಶದಲ್ಲಿ ಒಬ್ಬ ವ್ಯಕ್ತಿಯನ್ನು ಕೊಲೆ ಮಾಡಿದಾಗ ಜೀವಾವದಿ ಶಿಕ್ಷೆ ಕೊಡಲಾಗುತ್ತದೆ. ಆದರೆ ಕ್ರೂರ ರಜ್ವಿಗೆ ಮಾನ ಸನ್ಮಾನಗಳು ದೊರಕಿವೆ ಎಂಬುದಕ್ಕೆ ನಿಜಾಮನೆ ಸಾಕ್ಷಿ. "ಒಬ್ಬ ವ್ಯಕ್ತಿಯು ತನ್ನ ರಾಜಕೀಯ ಜೀವನದಲ್ಲಿ ಯಾವ ಕಪ್ಪು ಚುಕ್ಕೆಯನ್ನು ಯಾವೊಬ್ಬ ವ್ಯಕ್ತಿಯಿಂದಲೂ ಪಡೆಯಲು ಇಚ್ಛೆಇರುವುದಿಲ್ಲ. ಆದರೆ ಇಲ್ಲಿ ನೆಹರುರವರು ತಮ್ಮ ಸ್ವಾರ್ಥಕ್ಕೊಸ್ಕರವಾಗಿ ಕ್ರೂರಿ ರಜ್ವಿಯನ್ನು ಶಿಕ್ಷೆಕೊಡದೆ ಇರುವುದು ಅವರ ರಾಜಕೀಯತೆಯನ್ನು ಎತ್ತಿ ತೋರಿಸುತ್ತದೆ. ಹೀಗೆ ಉನ್ನತ ಹುದ್ದೆಯಲ್ಲಿದ್ದವರು, ಸ್ವಾರ್ಥಕ್ಕಾಗಿ ಏನು ಮಾಡಿದರು ಸರಿ ಅಂಶವನ್ನು ಈ ಅದ್ಯಯನದ ಸಂದರ್ಭದಲ್ಲಿ ಗುರುತಿಸಲಾಗಿದೆ.

ನಿಸ್ವಾರ್ಥ ಮೊನೋಭಾವದಿಂದ ನಿಜಾಮನ ವಿರುದ್ಧ ನಿರಂತರವಾಗಿ ಸ್ವಾತಂತ್ರ್ಯಯೋದರು ಹೋರಾಟ ನಡೆಸದೆ ಹೋಗಿದ್ದರೆ ಹಾಗೂ ಕೊನೆಯಲ್ಲಿ ಪೋಲಿಸ್ ಕಾರ್ಯಾಚರಣೆ ಜಾರಿಗೊಳಿಸದೆ ಇದ್ದಿದ್ದರೆ ಭಾರತದ ಭೂಪಟದ ಹೃದಯ ಭಾಗದಲ್ಲಿ ಪಾಕಿಸ್ತಾನ ದಂತ ಇನ್ನೊಂದು ವಿದೇಶಿ ರಾಷ್ಟ್ರವು ನಿವಾರಿಸಲಾಗದ ಹುಣ್ಣಿನಂತೆ ಉದ್ಭವಿಸುತ್ತಿತ್ತು. ಹೈದರಾಬಾದ ಸಂಸ್ಥಾನವನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸದೆ ಬಿಟ್ಟಿದ್ದರೆ ದೇಶವು ಅತೃಪ್ತಿಯಿಂದ ಕುದ್ದುಹೊಗುತ್ತಿತ್ತು. ಇತ್ತೆಹಾದನ ಕೋಮುವಾದದಿಂದಾಗಿ ಎರಡು ಪ್ರದಾನ ಸಮುದಾಯಗಳ ನಡುವೆ ಅಂತಃಕಲಹ ಬೆಳೆದು ಬಿಡುತ್ತಿತ್ತು. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯ ಅವಿಬಾಜ್ಯ ಅಂಗವಾಗಿ ಹೋಗಿರುವ ಭಾರತೀಯ ಮುಸ್ಲಿಂಮರು ಅನ್ಯರಾಗಿ ಉಳಿದು ಬಿಡುತ್ತಿದ್ದರು. ಈ ಎಲ್ಲಾ ವಿಷಮತೆಗಳ ನ್ನು ಪೋಲಿಸ ಕಾರ್ಯಾಚರಣೆ ಕೊನೆಗೊಳಿಸಿತು.

ಈ ರೀತಿಯಾಗಿ ಪೋಲಿಸ ಕಾರ್ಯಾಚರಣೆಯಿಂದ ಹೈದರಾಬಾದ ಸಂಸ್ಥಾನ ಸ್ವಾತಂತ್ರ್ಯವಾಯಿತು. ಬೀದರಿನ ಹಲವಾರು ಸ್ವಾತಂತ್ರ್ಯ ಯೋಧರು ಈ ಕಾರ್ಯಾಚರಣೆಯಲ್ಲಿ ತಮ್ಮ ಮಹತ್ವವಾದ ಪಾತ್ರ ವಹಿಸಿ. ತಮ್ಮ ಕಾಣಿಕೆ ಸಲ್ಲಿಸಿದ್ದಾರೆ ಎಂಬುದನ್ನು ಈ ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

## ಅಡಿ ಟಿಪ್ಪಣಿಗಳು

೦೧) ಗೋಪಾಲರಾವ ಹೇಜೀಬ್. ಹೈದರಾಬಾದ ಮುಕ್ತಿ ಸಂಘರ್ಷ ಪು – ೧

೦೨) ಅದೇ ಪು – ೨

೦೩) ಅದೇ ಪು – ೨

೦೪) ಅದೇ ಪು – ೩

೦೫) ಮಹಾಬಲೇಶ್ವರಪ್ಪಾ ಬಿ.ಸಿ., ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು ಪು – ೧೨೦.

೦೬)ಗೋಪಾಲರಾವ ಹೇಜೀಬ್. ಹೈದರಾಬಾದ ಮುಕ್ತಿ ಸಂಘರ್ಷ ಪು – ೧೦೯

೦೭) ಅದೇ ಪು – ೧೧೦

೦೮)ಮಹಾಬಲೇಶ್ವರಪ್ಪಾ ಬಿ.ಸಿ., ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು ಪು – ೧೨೦.

೦೯) ಗೋಪಾಲರಾವ ಹೇಜೀಬ್. ಹೈದರಾಬಾದ ಮುಕ್ತಿ ಸಂಘರ್ಷ ಪುಟ – ೧೧೧

೧೦) ಅದೇ ಪು – ೧೧೨

# ಅಧ್ಯಾಯ – ೭

# ಕರ್ನಾಟಕ ಏಕೀಕರಣ

**ಪೀಠಿಕೆ:**

ಕರ್ನಾಟಕ ಎಂಬುದು ಕನ್ನಡ ಭಾಷೆ, ಸಾಹಿತ್ಯ ಹಾಗೂ ಸಂಸ್ಕ್ರತಿಗಳನ್ನು ಒಳಗೊಂಡಿರುವ ಅತ್ಯಂತ ಮಹತ್ವದ ಹಾಗೂ ವಿಶಾಲ ವ್ಯಾಪ್ತಿಯ ಪರಿಕಲ್ಪನೆಯಾಗಿದೆ. ಕರ್ನಾಟಕ ಎಂಬ ಶಬ್ದವು ಮಹಾಭಾರತದ ಸಭಾಪರ್ವ ಹಾಗೂ ಭೀಷ್ಮ ಪರ್ವಗಳಲ್ಲಿ ಕಂಡುಬರುತ್ತದೆ. ಕದಂಬ ರಾಜ ಮನೆತನಕ್ಕೆ (ಕ್ರಿ.ಶ. ೪೫೦) ಸೇರಿದ ಒಂದು ತಾಮ್ರ ಪತ್ರದಲ್ಲಿ ಈ ನಾಡನ್ನು "ಸಮಗ್ರ ಕರ್ನಾಟಕ ದೇಶ" ಎಂದು ವರ್ಣಿಸಲಾಗಿದೆ. ನೃಪತುಂಗನ ಕವಿರಾಜಮಾರ್ಗದಲ್ಲಿ 'ಕಿಸುವೊಳಲು' 'ಕೊಪ್ಪಣ ನಗರ' 'ಪುಲಿಗೆರಿ' ಹಾಗೂ ಒಕ್ಕುಂದ ಎಂಬ ಹೆಸರುಗಳು ಬಂದಿವೆ. ಅಂದ ಮೇಲೆ ಇವೆಲ್ಲವು ಕರ್ನಾಟಕದ ಭಾಗಗಳಾಗಿವೆ. ಕರ್ನಾಟಕ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿತ್ತು ಎನ್ನಲಾಗಿದೆ.

"ಕಾವೇರಿಯಿಂದ ಮಾ ಗೋ
ದಾವರಿವರ ಮಿರ್ದ ನಾಡದಾ ಕನ್ನಡ ದೊಳ್!
ಭಾವಿಸಿದ ಜನಪದಂ ವಸು
ಧಾವಲಯ ವಿಲೀನ ವಿಷಯ ವಿಶೇಷಂ"[೧]

ನೃಪತುಂಗ (ಕ್ರಿ.ಶ. ೮೧೪ – ೮೭೮).

ಇಂದಿನ ಕರ್ನಾಟಕ ರಾಜ್ಯವು ಐದು ಆಡಳಿತ ವಿಭಾಗಗಳಲ್ಲಿ ಹಂಚಿಹೋಗಿತ್ತು. ಮತ್ತು ೧೪ ಕ್ಕೂ ಮಿಕ್ಕು ದೇಶಿಯ ಸಂಸ್ಥಾನಗಳು ಅಲ್ಲಿದ್ದವು. ಈ ಐದು ಆಡಳಿತ ವಿಭಾಗಗಳೆಂದರೆ ಮದ್ರಾಸ ಪ್ರಾಂತ, ಮೈಸೂರು ಪ್ರಾಂತ, ಬೊಂಬಾಯಿ ಪ್ರಾಂತ ನಿಜಾಮ ಸಂಸ್ಥಾನ (ಹೈದರಾಬಾದ) ಹಾಗೂ ಕೊಡಗು ಹೀಗೆ ಕನ್ನಡನಾಡು ಹರಿದು–ಹಂಚಿಹೋಗಿ. ಕನ್ನಡಿಗರು ಅಲ್ಪ ಸಂಖ್ಯಾತರಾಗಿದ್ದರು. ಅದೊಂದು ಮುರಿದ ಮನೆಯಾಗಿತ್ತು. ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಸೌಹಾರ್ದಯುತ ವಾತಾವರಣವೇ ಅಲ್ಲಿರಲಿಲ್ಲ. ಹೈದರಾಬಾದ ಸಂಸ್ಥಾನದ ಭಾಗವಾಗಿದ್ದ ಬೀದರ, ಗುಲಬರ್ಗಾ ಹಾಗೂ ರಾಯಚೂರ ಜಿಲ್ಲೆಗಳು ರಾಜ್ಯದ ಆಡಳಿತ ಭಾಷೆಯಾಗಿದ್ದ ಉರ್ದುವಿನ ಪ್ರಭಾವದಿಂದ ನರಳುತ್ತಿದ್ದವು ಕನ್ನಡ ಸಂಸ್ಕೃತಿಯ ಪಾವಿತ್ರ್ಯವನ್ನು ನಿಜಾಮ ಹಾಗೂ ರಜಾಕಾರರ ಕೋಮು ಮತಾಂಧತೆಯ ನೀತಿಯು ಹಾಳುಮಾಡಿತು. ಕನ್ನಡ ಭಾಷೆ ಬೆಳೆಯಬೇಕು.

ಅದು ಆಡಳಿತ ಹಾಗೂ ಶಿಕ್ಷಣದಲ್ಲಿ ಮಹತ್ವದ ಸ್ಥಾನ ಪಡದುಕೊಳ್ಳಬೇಕು ಎಂಬುದು ಕನ್ನಡಿಗರ ಅಭಿಲಾಷೆಯಾಗಿತ್ತು. ಈ ಬಗೆಯ ಸನ್ನಿವೇಶದ ಜಾಗೃತಿಯು ಕನ್ನಡಿಗರಲ್ಲಿ ಒಗ್ಗಟ್ಟನ್ನು ಹಾಗೂ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಒತ್ತಾಯಿಸುವ ಮನೋಭಾವವನ್ನು ಬೆಳೆಸಿತು.

೧೮೮೦ ರಲ್ಲಿ ಡೆಪ್ಯುಟಿ ಚನ್ನಬಸಪ್ಪನವರು ಬೊಂಬಾಯಿ ಕರ್ನಾಟಕದಲ್ಲಿ ಜನರನ್ನು ಸಂಘಟಿಸುವ ಆರಂಭದ ಪ್ರಯತ್ನ ಮಾಡಿದರು. ಆ ಭಾಗದ ಶಾಲೆಗಳಲ್ಲಿ ಕನ್ನಡವನ್ನು ಬೋಧಿಸುವಂತೆ ಒತ್ತಾಯಿಸಿ ಹೋರಾಟ ಮಾಡಿದರು. ಕರ್ನಾಟಕದ ವೈಭವದ ಪರಂಪರೆಯ ಪುನರ್ ದರ್ಶನವು ಪಾಶ್ಚಿಮಾತ್ಯ ವಿದ್ವಾಂಸರಾದ ಫ್ಲೀಟರೈಸ, ಕಿಟೆಲ ಮುಂತಾದವರ ಆಚಾರ್ಯ ಕೃತಿಗಳಿಂದ ಸಾಧ್ಯವಾಯಿತು. ಸಾಂಸ್ಕ್ರತಿಕ ಸಂಸ್ಥೆಗಳಾಗಿದ್ದ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ' (೧೮೯೦) ಮತ್ತು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು. (೧೯೧೫)ಗಳ ಕಾರ್ಯಗಳು ಹಾಗೂ ಮೈಸೂರು ವಿಶ್ವವಿದ್ಯಾಲಯವು ಕನ್ನಡಕ್ಕೆ ನೀಡಿದ ಪ್ರೋತ್ಸಾಹದಿಂದ ಅಖಂಡ ಕರ್ನಾಟಕ ರಚನೆಯ ಬೇಡಿಕೆಯು ಹೆಚ್ಚು ಜನಮನ್ನಣೆ ಗಳಿಸುವಂತಾಯಿತು.೧೯೧೫ರ ಮೇ ३,४ ಮತ್ತು ೫ ರಂದು ಬೆಂಗಳೂರಿನ್ಲಲಿ ನಡೆದ ಪ್ರಥಮ ಸಾಹಿತ್ಯ ಸಮ್ಮೆಳನದಲ್ಲಿ ಕನ್ನಡಿಗರಿಗಾಗಿ ಪ್ರತ್ಯೇಕ ರಾಜ್ಯ ರಚಿಸುವಂತೆ ಒತ್ತಾಯಿಸಿ ನಿರ್ಣಯ ಅಂಗೀಕರಿಸಲಾಯಿತು, ಈ ಸಮ್ಮೇಳನದಲ್ಲಿ ಬೀದರನ ಹಲವಾರು ಚಳುವಳಿಗಾರರು ಭಾಗವಹಿಸಿದ್ದರು, ಎನ್ನುವುದನ್ನು ಸ್ಮರಿಸಬಹುದು.

ಕನ್ನಡ ಭಾಷೆಯ ಕಟ್ಟಾ ಅಭಿಮಾನಿಯಾಗಿದ್ದ ಕಡಪ ರಾಘವೇಂದ್ರರಾವರು ಹೈದ್ರಾಬಾದ ಕರ್ನಾಟಕದ ಪ್ರದೇಶಗಳಲ್ಲಿ ಸಂಚರಿಸಿದರು. ೧೯೨೦ ರಲ್ಲಿ ಅದೇ ನಾಗಪುರದಲ್ಲಿ ನಡೆದ ಎ.ಐ.ಸಿ.ಸಿ. ಅಧಿವೇಶನಕ್ಕೆ ೮೦೦ ಪ್ರತಿನಿಧಿಗಳ ತಂಡವನ್ನು ಕರೆದೊಯ್ದು ಭಾಷಾವಾರು ಪ್ರಾಂತ ರಚನೆಯನ್ನು ಒತ್ತಾಯಿಸಿದರು. ಈ ೮೦೦ ಪ್ರತಿನಿಧಿಗಳಲ್ಲಿ ಬೀದರ ತಾಲೂಕಿನ ಬ್ರಿಜಪಾಲಸಿಂಗ ಠಾಕೂರ, ಮಾಣಿಕರಾವ ಪೂಲೆಕಾರ, ವಿ.ಎನ್. ಪಾಟೀಲ್ ಬಗ್ದಲ ಮುಂತಾದ ಸ್ವಾತಂತ್ರ್ಯಹೋರಾಟಗಾರರು ಭಾಗವಹಿಸಿದ್ದರು.

ಈ ಅಧಿವೇಶನದಲ್ಲಿ ಇಡೀ ದೇಶವನ್ನು ೨೧ ಭಾಷಾವಾರು ಪ್ರಾಂತಗಳಾಗಿ ವಿಂಗಡಿಸಲಾಯಿತು. ಅದರಂತೆ ಕರ್ನಾಟಕ ಪ್ರಾಂತ ಕಾಂಗ್ರೇಸ ಸಮಿತಿಯು ಕೆ.ಪಿ.ಸಿ.ಸಿ. ಅಸ್ತಿತ್ವಕ್ಕೆ ಬಂದಿತು ಕರ್ನಾಟಕ ಏಕೀಕರಣ ಚಳುವಳಿಯ ಚರಿತ್ರೆಯಲ್ಲಿ ಇದೊಂದು ಮಹತ್ವದ ಮೈಲಿಗಲ್ಲಾಯಿತು. ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರಾದ ರಂಗನಾಥ ಸಾಯಗಾಂವಕರವರು ಬೀದರ ಜಿಲ್ಲಾ ಕಾಂಗ್ರೇಸ ಘಟಕವನ್ನು ಸ್ಥಾಪಿಸಿದರು.

## ಏಕೀಕರಣಕ್ಕೆ ಪ್ರೇರಕವಾದ ಅಂಶಗಳು:

### ಪತ್ರಿಕೆಗಳು ಹಾಗೂ ಸಾಹಿತ್ಯ ಕೃತಿಗಳ ಪಾತ್ರ:

ಸ್ವಾತಂತ್ರ್ಯ ಚಳುವಳಿಗೆ ಸಮಾನಾಂತರವಾಗಿ ಸ್ವಾತಂತ್ರ್ಯಯೋದರು ಕನ್ನಡ ಭಾಷೆ ಮಾತನಾಡುವ ಪ್ರದೇಶದ ಏಕೀಕರಣಕ್ಕಾಗಿಯೂ ಹೋರಾಟ ನಡೆಸುತ್ತಿದ್ದರು. ಸಂಯುಕ್ತ ಕರ್ನಾಟಕ, ಪ್ರಪಂಚ ಇತ್ಯಾದಿ. ಹುಬ್ಬಳ್ಳಿಯಿಂದ ಗುಲಬರ್ಗಾದಿಂದ ನಾಗರಿಕ, ಬೆಂಗಳೂರಿನ ಕನ್ನಡ ನುಡಿ, ಬಿಜಾಪುರದ ಕರ್ನಾಟಕ ಗತವೈಭವ, ಬೀದರ ತಾಲ್ಲೂಕಿನ ಸ್ವಾಭಿಮಾನಿ ಕರ್ನಾಟಕ, ಬಹಿರಂಗ ಸುದ್ದಿ, ಶಾಂತಿ ಕಿರಣ, ವಚನ ಕ್ರಾಂತಿ, ಉತ್ತರ ಕರ್ನಾಟಕ ಹೀಗೆ ಹಲವಾರು ಪತ್ರಿಕೆಗಳು ಕರ್ನಾಟಕ ಪರಂಪರೆ ಬಗ್ಗೆ ಹಲವಾರು ಲೇಖನ ಹಾಗೂ ಕರ್ನಾಟಕ ಸಂಘದ ಚಟುವಟಿಕೆಗಳು ಭಾಷಾವಾರು ಪ್ರಾಂತ ರಚನೆಗಾಗಿ ಜನರು ಹೋರಾಟ ಮಾಡಲು ಸೂಕ್ತವಾದ ವಾತಾವರಣವನ್ನು ಸೃಷ್ಟಿಸಿದವು.

ಅಸಾಮಾನ್ಯ ಕೃತಿಗಳಾದ ಆಲೂರು ವೆಂಕಟರಾಯರ 'ಕರ್ನಾಟಕ ಗತ ವೈಭವ" ಡಿ.ಕೆ. ಭಾರದ್ವಾಜರ 'ಕನ್ನಡ ಕೈಪಿಡಿ' ಎಸ್.ಬಿ.ಜೋಶಿಯವರ ಕರ್ನಾಟಕ ವೀರ ಕ್ಷತ್ರಿಯರು ಮುಂತಾದವು ಕನ್ನಡಿಗರಿಗೆ ತಮ್ಮ ಗತ ವೈಭವವನ್ನು ಅರಿತುಕೊಳ್ಳಲು ಹಾಗು ತಾಯಿನಾಡಿನ ಏಕೀಕರಣಕ್ಕಾಗಿ ಹೋರಾಡಲು ಸಾಧನವಾದವು. ಆಲೂರು ವೆಂಕಟರಾಯರು "ಕನ್ನಡ ಪ್ರದೇಶಗಳ ಏಕೀಕರಣದಲ್ಲಿ ಭಾರತದ ಅಖಂಡತೆ ಅಡಗಿದೆ"[9] ಎಂಬ ತತ್ವವನ್ನು ಅವರು ಮಂಡಿಸಿದರು. ಕನ್ನಡಿಗರ ಸರ್ವಾಂಗೀಣ ಅಭಿವೃದ್ಧಿಗಾಗಿ ಹಾಗೂ ಏಕತೆಯನ್ನು ಸಾಧಿಸುವುದಕ್ಕಾಗಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವ ಅವಶ್ಯಕತೆಯನ್ನು ಒತ್ತಿ ಹೇಳಿದರು. ಈ ಮೇಲಿನ ಸಾಹಿತಿಕ ಕೃತಿಗಳು, ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಜಾಗೃತಿ ಮೂಡಿಸಿ ಏಕೀಕರಣದಲ್ಲಿ ಧುಮುಕಿದರು ಎನ್ನುವುದು ತಿಳಿದು ಬಂದಿದೆ.

### ದೇಶ ಭಕ್ತಿಗೀತೆಗಳಿಂದ ಸ್ಫೂರ್ತಿ:

ಅಖಂಡ ಕರ್ನಾಟಕದ ಕನಸನ್ನು ನನಸು ಮಾಡಲು ಹಾಗೂ ಕನ್ನಡಿಗರಿಗೆ ಸ್ಫೂರ್ತಿ ನೀಡಲು ಕೆಲಸ ಮಾಡಿದ ವಿವಿಧ ಪ್ರಾಂತಗಳಿಗೆ ಹಾಗೂ ದೇಶಿಯ ಸಂಸ್ಥಾನಗಳಿಗೆ ಸೇರಿದ ಪ್ರಮುಖ ಬರಹಗಾರರೆಂದರೆ ಬಿ.ಎಂ.ಶ್ರೀಕಂಠಯ್ಯ, ಕೆ.ವಿ.ಪುಟ್ಟಪ್ಪ, ದ.ರಾ. ಬೇಂದ್ರೆ, ಗೊವಿಂದ ಪೈ, ಮಾಸ್ತಿ ವೆಂಕಟೇಶ ಅಯ್ಯಂಗಾರ, ಜಿ.ಪಿ. ರಾಜರತ್ನಂ, ಜಯದೇವಿತಾಯಿ, ಲಿಗಾಡೆ, ಶಾಂತರಸ ಮುಂತಾದವರು. ಇವರೆಲ್ಲರ ದೇಶಭಕ್ತಿಗೀತೆಗಳನ್ನು ಆಲಿಸಿ ಬೀದರ ತಾಲ್ಲೂಕಿನ ಹೋರಾಟಗಾರರು ಏಕೀಕರಣ ಚಳುವಳಿಯಲ್ಲಿ ಧುಮಕಲು ಪ್ರೇರಕವಾದವು ಎಂಬುಂದು ಈ ಸಂಶೋಧನೆಯಿಂದ ತಿಳಿದು ಬಂದಿದೆ.

**ಪ್ರಮುಖ ದೇಶ ಭಕ್ತಿ ಗೀತೆಗಳೆಂದರೆ:**

ಎ) ನೀ ಮುಟ್ಟುವ ನೆಲ ಕರ್ನಾಟಕ. . . . . .

. . . . . . ಜಯಹೇ ಕರ್ನಾಟಕ ಮಾತೆ

ಬಿ) ದೀಕ್ಷೆಯ ತೊಡು ಇಂದೇ

ಕಂಕಣ ಕಟ್ಟಿಂದೇ

ಕನ್ನಡ ನಾಡೊಂದೇ.

ಸಿ) ಓ ತಾಯಿ ಕನ್ನಡದ ಹಿರಿತಾಯಿ

ಮೂಡುತಿದೆ ಐಕ್ಯೆಕ ಕರ್ನಾಟಕದ ಕನಸು

ನೋಡುತಿದೆ ನಿಡುಬಯಸಿ ನಿಖಿಲ ಕನ್ನಡ ಮನಸು

ಕೆ.ವಿ.ಪುಟ್ಟಪ್ಪ.

ಡಿ) ತಾಯೆ ಬಾರ ಮೊಗವ ತೋರ ಕನ್ನಡಗರ ಮಾತೆಯೇ

ಹರಸುತಾಯೆ ಸುತರಾಕಾಯೆ ನಮ್ಮ ಜನ್ಮದಾತೆಯೇ

ಗೋವಿಂದಪೈ.

ಇ) ಅಖಂಡ ಕರ್ನಾಟಕವೇ ನನ್ನ ಮೇಲೆ

ಕನ್ನಡ ಕುಲುಮೆ ನನ್ನ ಕುಲ

ಕನ್ನಡದ ಏಳ್ಗೆ ನನ್ನ ಏಳ್ಗೆ

ಜಯದೇವಿ ತಾಯಿಲಿಗಾಡೆ.[೩]

ಹೀಗೆ ಹಲವಾರು ದೇಶಭಕ್ತಿಗೀತೆಗಳು ಇಡೀ ಕರ್ನಾಟಕದ ಜನತೆಯಲ್ಲಿ ಹೋರಾಟದ ಮನೋಭಾವನೆಯನ್ನು ಬೆಳೆಸಿದವು. ಅಖಂಡ ಕರ್ನಾಟಕಕ್ಕಾಗಿ ಹೋರಾಡುವಂತೆ ಜನರಿಗೆ ಜಾಗೃತಿ ಮೂಡಿಸುವಂತಹ ಕಾರ್ಯವನ್ನು ಮಾಡಿದವು. ಹೈದರಾಬಾದ ಕರ್ನಾಟಕ ಪ್ರದೇಶದ ಹಲವಾರು ಸಾಹಿತಿಗಳು ಮತ್ತು ಬೀದರನ ಸಾಹಿತಿಗಳೂ ಈ ಭಾಗದ ತುಂಬೆಲ್ಲಾ ಸಂಚರಿಸಿ ವಿಲೀನದ ಪರವಾಗಿ ಸಾರ್ವಜನಿಕಾಭಿಪ್ರಾಯವನ್ನು ರೂಪಿಸಿದರು.

## ಹೈದರಾಬಾದ ಪ್ರದೇಶ ಕರ್ನಾಟಕ ಸಂಘ:

ಹೈದರಾಬಾದ ಕರ್ನಾಟಕ ಪ್ರದೇಶದ ಜನತೆಯ ಸಮಸ್ಯೆಗಳು ಭಾರತ ಒಕ್ಕೂಟದೊಳಗೆ ಹೈದರಾಬಾದನ ವಿಲಿನದಿಂದ ಪೂರ್ತಿ ಪರಿಹಾರವಾಗಲಿಲ್ಲ. ವಿಲೀನದಿಂದ ಹೈದರಾಬಾದ ಕರ್ನಾಟಕ ಪ್ರದೇಶದ ಕನ್ನಡಿಗರಿಗೆ ಸಮಾಧಾನವಾಗಲಿಲ್ಲ. ಮುಸ್ಲಿಂ ಸರ್ವಾಧಿಕಾರದಿಂದ ಬಿಡುಗಡೆ ಪಡೆಯುವುದಕ್ಕಿಂತ ಹೊಸ ಕರ್ನಾಟಕ ಪ್ರಾಂತದಲ್ಲಿ ಪ್ರತಿಷ್ಠಿತ ಸ್ಥಾನ ಪಡೆಯುವದು ಈ ಭಾಗದ ಕನ್ನಡಿಗರ ಸಮಸ್ಯೆಯಾಗಿತ್ತು. ಕರ್ನಾಟಕದ ಉಳಿದ ಭಾಗದಲ್ಲಿದ್ದ ತಮ್ಮ ರಕ್ತ ಸಂಬಂಧಿಗಳ ಜೊತೆ ವಿಲೀನಗೊಳ್ಳದೆ ಹಾಗೂ ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳದೆ ಅವರು ಶಾಂತಿಯನ್ನು ಕಾಣುವಂತಿರಲಿಲ್ಲ. ಹೈದರಾಬಾದ ಸಂಸ್ಥೆಯ ಕನ್ನಡಿಗರ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಂಸ್ಥೆಯಾಗಿದ್ದ ನಿಜಾಮ ಕರ್ನಾಟಕ ಪರಿಷತ್ತು ರಾಯಚೂರು ಬೀದರ ಹಾಗೂ ಗುಲಬರ್ಗಾ ಜಿಲ್ಲೆಗಳಲ್ಲಿ ತಮ್ಮ ಸಾಂಸ್ಕೃತಿಕ ವಿಶಿಷ್ಟತೆಯನ್ನು ಕಳೆದುಕೊಳ್ಳುತ್ತಿದ್ದ ಕನ್ನಡಿಗರಲ್ಲಿ ಸ್ಫೂರ್ತಿ ತುಂಬಿ ಅಖಂಡ ಕರ್ನಾಟಕ ರಚನೆಗೆ ಹೃತ್ಪೂರ್ವಕ ಬೆಂಬಲ ನೀಡುವಂತೆ ಶ್ರಮಿಸುತ್ತಿತ್ತು.

ಈ ಪರಿಷತ್ತಿನ ಸಮ್ಮೇಳನಗಳು ಬ್ರಿಜಪಾಲಸಿಂಗ ಠಾಕೂರ, ಮಾಣಿಕರಾವ ಪುಲೇಕರ. ರಂಗನಾಥ ಸಾಯಗಾಂವಕಾರವರ ನೇತೃತ್ವದಲ್ಲಿ ೧೯೪೦ರಲ್ಲಿ ಜನಾರ್ಧನ ದೇಸಾಯಿಯವರ ಅಧ್ಯಕ್ಷತೆಯಲ್ಲಿ ಜರುಗಿತು. "ನಿಜಾಮ ಪರಿಷತನ ಚಟುವಟಿಕೆಗಳು ಕನ್ನಡಿಗರನ್ನೆಲ್ಲಾ ಒಂದೇ ವೇದಿಕೆಯಲ್ಲಿಡಿ ತಂದಿತು. ಇದು ಕನ್ನಡಿಗರಲ್ಲಿ ಏಕತೆ ಭಾವನೆಯನ್ನು ಹಾಗೂ ಆತ್ಮ ವಿಶ್ವಾಸವನ್ನು ಮೂಡಿಸಿತು."[೪]

## ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ಹಾಗೂ ಕೆ.ಪಿ.ಸಿ.ಸಿ.

ಹೈದರಾಬಾದ ಸಂಸ್ಥಾನವನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸಿದ ಸೆಪ್ಟೆಂಬರ ೧೯೪೮ ರ ನಂತರ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಕಾರ್ಯಕರ್ತರ ಪರಿಶ್ರಮದಿಂದಾಗಿ ಭಾಷಾವಾರು ಪ್ರಾಂತ ರಚನೆಯನ್ನು ಒತ್ತಾಯಿಸುವ ಚಳುವಳಿ ತಿವ್ರಗೊಂಡಿತು ಗುಲಬರ್ಗಾ ೧೯೪೯ ಮಾರ್ಚ ೫, ೬ ಹಾಗೂ ೭ ರಂದು ೩೨ ನೇ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವು ಉತ್ತಂಗಿ ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಮ್ಮೇಳನದಲ್ಲಿ ಮಾಣಿಕರಾವ ಚೌಧರಿ, ರಾಮಕೃಷ್ಣರಾವ ಆಣದೂರ, ಬಸವಂತಾಯ ಶೆಟಕಾರ, ಗ್ಯಾನರಾವ, ಗುರಪ್ಪ ಲಾಡಗೇರಿ, ಹೀಗೆ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ಹಲವಾರು ಜನರೊಂದಿಗೆ ಭಾಗವಹಿಸಿ ಬೀದರ ತಾಲ್ಲೂಕಿನ ಪಾತ್ರವನ್ನು ಮೆರೆಯಿಸಿದರು.

ಇವರೆಲ್ಲರೂ ರಮಾನಂದ ತೀರ್ಥರ ಮಾರ್ಗದರ್ಶನದಂತೆ ಬೀದರನ ಎಲ್ಲಾ ಪ್ರದೇಶವನ್ನೆಲ್ಲಾ ಸಂಚರಿಸಿ ಅತ್ಯಂತ ಉತ್ಸಾಹದಿಂದ ಸಮ್ಮೇಳನಕ್ಕೆ ಪ್ರತಿನಿಧಿಗಳನ್ನು ಹಾಗೂ ದೇಣಿಗೆಯನ್ನು ಸಂಗ್ರಹಿಸಿದರು. ಸಮ್ಮೇಳನದ ಸಂದೇಶವನ್ನು ಜನರಿಗೆ ತಲುಪಿಸಲು ಇವರೆಲ್ಲರೂ ಸಮ್ಮೇಳನದಲ್ಲಿ ಕ್ರೀಯಾಶೀಲರಾಗಿ ಕೆಲಸ ಮಾಡಿದರು. ಕನ್ನಡ ಭಾಷಿಕರನ್ನು ಒಂದುಗೂಡಿಸುವ ನಿರ್ಣಯ ಕೈಗೊಂಡಿತು.

**ರೈತ ಪರಿಷತ್ತು; ಹಾಗೂ ಹೆಚ.ಪಿ.ಕೆ.ಸಿಯ ಚಟುವಟಿಕೆಗಳು:**

"೧೯೪೯ರಲ್ಲಿ ಮುನಿರಾಬಾದನಲ್ಲಿ ಬೈಲಹೊಂಗಲದ ತಾಳೂರ ರಾಯನಗೌಡ ಪಾಟಿಲರ ಅಧ್ಯಕ್ಷತೆಯಲ್ಲಿ ನಡೆದ ಕೊಪ್ಪಳನಾಡಿನ ಪ್ರಥಮ ರೈತ ಪರಿಷತ್ತಿನ ಸಭೆಯಲ್ಲಿ ವಿಶಾಲ ಕರ್ನಾಟಕ ಏಕೀಕರಣಗೊಳಿಸುವ ನಿರ್ಣಯ ಕೈಗೊಳ್ಳಲಾಯಿತು." [೫]

ನವೆಂಬರ ೧೯೫೦ ರಂದು ಜನಾರ್ಧನ ದೇಸಾಯಿಯವರು ೧೯೫೦ ರಂದು ಗುಲಬರ್ಗಾ ಜಿಲ್ಲೆಯ ತಾಡೂರಿನಲ್ಲಿ ಹೈದ್ರಾಬಾದ ಪ್ರದೇಶ ಕರ್ನಾಟಕ ಕಾಂಗ್ರೇಸ ಸಮೀತಿಯ ಸಭೆ ಕರೆದು ಕನ್ನಡ ಮಾತನಾಡುವವರಿಗಾಗಿ ಪ್ರತ್ಯೇಕ ಪ್ರಾಂತ ರಚನೆಗಾಗಿ ಚಳುವಳಿ ಪ್ರಾರಂಭಿಸಲು ನಿರ್ಧರಿಸಲಾಯಿತು. ಈ ಉದ್ದೇಶಕ್ಕಾಗಿ ಎಚ್.ಪಿ.ಕೆ.ಸಿ.ಯು ಒಂದು ಕ್ರಿಯಾ ಸಮಿತಿಯನ್ನು ರಚಿಸಿ ಬೀದರ ಜಿಲ್ಲೆಯ ಆರ್.ಬಿಡಪ, ಗುಲಬರ್ಗಾ ಜಿಲ್ಲೆಯ ಸರದಾರ ಶರಣಗೌಡ ಇನಾಂದರ ಮತ್ತು ರಾಯಚೂರು ಜಿಲ್ಲೆಯ ಶಿವಮೂರ್ತಿ ಅಳವಂಡಿ ರವರುಗಳನ್ನು ಸದಸ್ಯರನ್ನಾಗಿ ನೇಮಿಸಿತು. ಈ ಕ್ರಿಯಾ ಸಮಿತಿಯು ಇಡೀ ಹೈದರಾಬಾದ ಕರ್ನಾಟಕ ಪ್ರದೇಶವನ್ನೆಲ್ಲಾ ಸಂಚರಿಸಿ ತಾಲೂಕ ಮಟ್ಟದಲ್ಲಿ ಕರ್ನಾಟಕ ಏಕೀಕರಣ ಸಮಿತಿಗಳನ್ನು ರಚಿಸಿ ಏಕೀಕರಣಕ್ಕೆ ಜನರ ಬೆಂಬಲ ಸಿಗುವಂತೆ ಮಾಡಿದರು. ಅದರಂತೆ ಬೀದರ ತಾಲ್ಲೂಕ ಏಕೀಕರಣ ಸಮಿತಿ ರಚಿಸಲಾಯಿತು.

**ಪೊಟ್ಟಿ ಶ್ರೀರಾಮುಲು ಅಮರಣಾಂತ ಉಪವಾಸದ ಪರಿಣಾಮ.**

ಪ್ರತ್ಯೇಕ ಆಂಧ್ರ ರಾಜ್ಯವನ್ನು ಸ್ಥಾಪಿಸಬೇಕೆಂದು ಒತ್ತಾಯಿಸಿ ೧೯ನೇ ಅಕ್ಟೋಬರ ೧೯೫೨ ರಂದು ಪೊಟ್ಟಿ ಶ್ರೀರಾಮುಲುರವರು ಅಮರಣಾಂತ ಉಪವಾಸ ಪ್ರಾರಂಭಿಸಿದರು. ಅವರು ೫೮ ದಿನಗಳ ಉಪವಾಸ ಮುಷ್ಕರದ ನಂತರ ೧೫ನೇ ಡಿಸೆಂಬರ ೧೯೫೨ ರಂದು ಅಸುನೀಗಿದರು. ಇದಾದ ನಂತರ ಆಂದ್ರಾದ್ಯಂತ ಘರ್ಷಣೆಗಳುಂಟಾಗಿ ಸರ್ಕಾರದ ಆಸ್ತಿಪಾಸ್ತಿಗೆ ಕೋಟ್ಯಾಂತರ ರೂಪಾಯಿ ಹಾನಿಯುಂಟಾಯಿತು. ಇದಾದ ಮೇಲೆ ೧೯ನೇ ಡಿಸೆಂಬರ ೧೯೫೨ ರಂದು ಪ್ರಧಾನಮಂತ್ರಿ ನೆಹೆರುರವರು ಸಂಸತನಲ್ಲಿ ಆಂಧ್ರರಾಜ್ಯ ಸ್ಥಾಪನೆಯ ಸರ್ಕಾರದ ನಿರ್ಧಾರವನ್ನು ಪ್ರಕಟಿಸಿದರು. ಈ ಘೋಷಣೆಯು ಕನ್ನಡಿಗರಲ್ಲಿ ಹೊಸ ಆಸೆ ಮೂಡಿಸಿತು.

ಆಂಧ್ರ ಪ್ರದೇಶ ಬೀದರಗೆ ಅತೀ ಸಮೀಪದ ನೆರೆಯ ರಾಜ್ಯ ಆಗಿರುವುದರಿಂದ, ಇದರ ಪ್ರಭಾವ ಹೆಚ್ಚಾಗಿ ಬೀದರ ತಾಲ್ಲೂಕಿನ ಮೇಲೆ ಆಯಿತು ಎಂದು ತಿಳಿದುಕೊಳ್ಳಲಾಗಿದೆ.

**ನಾನಲ ಕಾಂಗ್ರೇಸ್:**

೧೭ನೇ ಸೆಪ್ಟೆಂಬರ ೧೯೫೩ ರಂದು ಹೈದರಾಬಾದ ನಾನಲ ನಗರದಲ್ಲಿ ನಡೆದ ಅಧಿವೇಶನದಲ್ಲಿ 'ಸಧ್ಯಕ್ಕೆ ಆಂಧ್ರ ರಾಜ್ಯವನ್ನು ಬಿಟ್ಟು ಬೇರೆ ಯಾವ ಭಾಷಾವಾರು ಪ್ರಾಂತಗಳನ್ನು ರಚಿಸುವುದಿಲ್ಲ ಎಂಬ ನಿರ್ಣಯ ಅಂಗೀಕರಿಸಲಾಯಿತು. ನಾನಲ ನಗರದ ನಿರ್ಣಯವನ್ನು ಪ್ರತಿಭಟಿಸಲು ೧೯೫೩ ರಲ್ಲಿ ಸರ್ವಪಕ್ಷಗಳ ಒಂದು ಸಭೆಯನ್ನು ಸೇರಿಸಲಾಯಿತು. ಈ ಸಮಾವೇಶದಲ್ಲಿ ಶಿವಮೂರ್ತಿ ಅಳವಂಡಿಯವರನ್ನು ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಲಾಯಿತು. ಬೀದರ ಏಕೀಕರಣದ ಹೋರಾಟಗಾರರಾದ ರಂಗನಾಥ ಸಾಯಗಾಂವಕಾರ ಈ ಸಮಾವೇಶದಲ್ಲಿ ಪಾಲ್ಗುಡಿದ್ದರು. ನಾನಲ ನಗರದ ನಿರ್ಣಯವನ್ನು ತಿರಸ್ಕರಿಸುವಂತೆ ಸಮಿತಿಯು ಸರ್ಕಾರವನ್ನು ಒತ್ತಾಯಿಸಿತು. ಭಾಷಾವಾರು ಪ್ರಾಂತಗಳ ರಚನೆಗಳ ಗಡಿ ಆಯೋಗವನ್ನು ರಚಿಸುವಂತೆ ಕರೆ ನೀಡಿತು.

ಹೈದರಾಬಾದ ಕರ್ನಾಕಟಕದ ವಿಧಾನ ಸಭಾ ಹಾಗೂ ಲೋಕ ಸಭಾ ಸದಸ್ಯರು ಹಲವಾರು ಸ್ವಾತಂತ್ರ್ಯಹೋರಾಟಗಾರರು ನಾನಲ ನಗರದ ನಿರ್ಣಯಕ್ಕೆ ತಮ್ಮ ತೀವ್ರ ಪ್ರತಿಭಟನೆ ವ್ಯಕ್ತಪಡಿಸಿದರು. ಹೀಗೆ ಕರ್ನಾಟಕದಲ್ಲಿ ಏಕೀಕರಣ ಚಳುವಳಿಯು ತೀವ್ರತೆ ಪಡೆದುಕೊಂಡಿತು.

**ಫಜಲ ಅಲಿ ಆಯೋಗ:**

ಕೇಂದ್ರ ಸರಕಾರವು ಭಾರತದಲ್ಲಿ ಭಾಷಾವಾರು ಪ್ರಾಂತಗಳನ್ನು ರಚನೆ ಮಾಡಲು ೧೯೫೩ ರಲ್ಲಿ ರಾಜ್ಯ ಪುನರ ವಿಂಗಡನಾ ಆಯೋಗವನ್ನು ನೇಮಿಸಿತು. ಇದನ್ನು ಫಜಲ ಅಲಿ ಕಮಿಟಿ ಎಂತಲೂ ಕರೆಯುವರು.

ಫಝುಲ ಅಲಿ ಎಚ್.ಎನ್. ಖುಂಜ್ರು ಮತ್ತು ಕೆ.ಎಮ್. ಫಣಿಕ್ಕರ ಈ ಕಮಿಟಿಯ ಸದಸ್ಯರಾಗಿದ್ದರು. ಈ ಸಮಿತಿ ರಾಷ್ಟ್ರಾದ್ಯಂತ ೩೮,೦೦೦ ಮೈಲಿ ಪ್ರವಾಸ ಮಾಡಿ ೧ ೧/೨ ಲಕ್ಷ ಮನವಿಗಳನ್ನು ಸ್ವೀಕರಿಸಿ, ೯೦೦೦ ಜನರೊಂದಿಗೆ ಸಂದರ್ಶಿಸಿ ಅಕ್ಟೋಬರ ೧೦,೧೯೫೫ ರಲ್ಲಿ ತನ್ನ ವರದಿ ಸಲ್ಲಿಸಿತು. ಫಜಲಿ ಆಯೋಗದ ಮುಂದೆ ಜನರು ತಮ್ಮ ಅಭಿಪ್ರಾಯಗಳನ್ನು ಮುಂದಿಡಲು ಜನರು ಉತ್ಸುಕರಾಗಿದ್ದರು. ಏಕೆಂದರೆ ಅವರುಗಳು ಕೆಳಕಂಡ ಸತ್ಯವನ್ನು ದೃಡವಾಗಿ ನಂಬಿದ್ದರು.

" ಪ್ರಜಾಪ್ರಭುತ್ವಕ್ಕೆ ಅವಶ್ಯಕವಾದ ಸಾಮಾಜಿಕ ಏಕತೆಯನ್ನು ಭಾಷಾವಾರು ಪ್ರಾಂತಗಳು ಒದಗಿಸುತ್ತದೆ. ವಿದೇಶಿ ಭಾಷೆ ನೆಟ್ಟಿಕೊಂಡು ಯಾವ ಪ್ರಜಾಪ್ರಭುತ್ವವು ಬಾಳಲಾರದು" [೬]

**ಬಿಕ್ಕಟ್ಟು:**

ಕೆಲವು ರಾಜಕೀಯ ಧುರೀಣರು ಮುಖ್ಯವಾಗಿ ಮೈಸೂರು ಪ್ರದೇಶದವರು ಸಂಯುಕ್ತ ಕರ್ನಾಟಕ ರಚನೆ ವಿರುದ್ಧ ಪ್ರಾಚಾರ ನಡೆಸುತ್ತಿದ್ದಾರೆ. 'ಮೈಸೂರು ಮೈಸೂರಿನವರಿಗೆ' ಎಂಬುದು ಅವರ ಘೋಷಣೆಯಾಗಿತ್ತು. ಈ ಮದ್ಯೆ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಸಮಿತಿ. ಕೆ.ಪಿ.ಸಿ.ಸಿ ಹಾಗೂ ಕನ್ನಡ ಸಾಹಿತ್ಯ ಪರಿಷತ್ತುಗಳು ಒಂದು ಹೇಳಿಕೆ ನೀಡಿ ಎಲ್ಲಾ ಭಾಗದ ಕನ್ನಡಿಗರೂ ಜಾತಿ ಬೇದ ಮರೆತು ಏಕೀಕರಣ ವಿರೋಧಿ ಭಾವನೆಯನ್ನು ತೊರೆಯಬೇಕೆಂದು ಕರೆ ನೀಡಿತು.

"ಕನ್ನಡದ ಎಲ್ಲಾ ಪ್ರದೇಶಗಳನ್ನು ಅಂದರೆ ಕೊಡಗು, ಹೈದರಾಬಾದ, ಮದರಸು ಹಾಗೂ ಬೊಂಬಾಯಿ ಪ್ರಾಂತಗಳಲ್ಲಿನ ಕನ್ನಡ ಮಾತನಾಡುವ ಪ್ರದೇಶಗಳೆಲ್ಲವನ್ನು ಮೈಸೂರು ರಾಜ್ಯದೊಂದಿಗೆ ಸೇರಿಸಿ ಕರ್ನಾಟಕ ರಚಿಸಬಹುದು".[೭] ಎಂದು ಕೆಂಗಲ ಹನುಮಂತಯ್ಯನವರು ಹೇಳಿದರು. ಈ ಹೇಳಿಕೆ "ಮೈಸೂರಿನವರು ಕರ್ನಾಟಕದ ಏಕೀಕರಣದ ಪರವಾಗಿಲ್ಲ" ಎಂಬ ಅನುಮಾನವನ್ನು ತೊಡೆದು ಹಾಕಿತು. ಬಿಕ್ಕಟ್ಟು ಪರಿಹಾರವಾಗಿ ಏಕೀಕರಣಕ್ಕೆ ಏಕತೆಯನ್ನು ಸೂಚಿಸಲಾಯಿತು.

**ಏಕೀಕರಣ ಧುರೀಣರ ಭೇಟಿ:**

ಹೈದರಾಬಾದ ಕರ್ನಾಟಕದ ಜನಪ್ರಿಯ ನಾಯಕರುಗಳಾದ ಜನಾರ್ಧನರಾವ ದೇಸಾಯಿ, ಬೀದರ ಜಿಲ್ಲೆಯ ಆರ್.ವಿ.ಬಿಡಪ್ಪ. ಬೀದರ ತಾಲ್ಲೂಕಿನ ರಂಗನಾಥರಾವ ಸಾಯಗಾಂವಕರ, ಅಪ್ಪಾರಾವ ಶೆಟಕಾರ, ಕೆ.ಎಸ್.ರಾಜ ಮಾಸ್ತಾರ. ಮುರಳೀಧರರಾವ ಕಾಮತಿಕರ ಮುಂತಾದವರು ಏಕೀಕರಣ ಸಮಿತಿಯ ಸದಸ್ಯರುಗಳ ಜೊತೆಗೂಡಿ ಕರ್ನಾಟಕ ಪ್ರದೇಶ ದ್ಯಾಂತ ಬಿರುಗಾಳಿಯಂತೆ ಸಂಚರಿಸಿ ಸಾರ್ವಜನಿಕಾಭಿಪ್ರಾಯವನ್ನು ರೂಪಿಸಿ ಫಜಲ್ ಅಲಿ ಆಯೋಗದ ಮುಂದೆ ಮುಡಿಸಲು ಮನವಿ ಪತ್ರಗಳನ್ನು ಸಂಗ್ರಹಿಸಿದರು.

**ನವ ಮೈಸೂರಿನ ಉದಯ:**

ಅಮೃತಸರದಲ್ಲಿ ೧೦-೨-೧೯೫೬ ರಲ್ಲಿ ಸೇರಿದ್ದ ಎ.ಐ.ಸಿ.ಸಿ. ಅಧಿವೇಶನವು ರಾಜ್ಯಗಳ ಸ್ಥಾಪನೆಗೆ ರಾಜ್ಯ ಪುನರ ವಿಂಗಡಣೆ ಆಯೋಗದ ವರದಿಯನ್ನು ವರದಿಯನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡಿತು. ರಾಜ್ಯ ಪುನರ ವಿಂಗಡಣೆ ಮಸೂದೆಯನ್ನು ಆಯಾ ರಾಜ್ಯಗಳಿಗೆ ತಮ್ಮ ಅಭಿಪ್ರಾಯ ಸೂಚಿಸಲು ಕಳುಹಿಸಿಕೊಡಲಾಯಿತು. ಇದಕ್ಕೆ ಮುಂಚೆಯೇ ಕಾಂಗ್ರೇಸ್ ಹೈದರಾಬಾದ ಕರ್ನಾಟಕ ಹೈಕಮಾಂಡು ಯಾವುದೇ ತಿದ್ದುಪಡಿಗಳಿಲ್ಲದೆ. ವಿಧಾನಸಭೆಯಲ್ಲಿ ಮಸೂದೆಯನ್ನು ಅದಿರುವ ಸ್ವರೂಪದಲ್ಲಿ ಒಪ್ಪಿಕೊಳ್ಳಬೇಕೆಂಬ ಕಾಂಗ್ರೇಸ ಕ್ರಮವನ್ನು ಒಂದೆ ಧ್ವನಿಯಲ್ಲಿ ವಿರೋಧಿಸಲಾಯಿತು. ಕುತೂಹಲದ ಸಂಗತಿ ಎಂದರೆ ಪಾರ್ಲಿಮೆಂಟಿನಲ್ಲಿ ವಿರೋಧ ಪಕ್ಷಗಳು.

೧) ಬಳ್ಳಾರಿಯನ್ನು ಒಳಗೊಂಡಂತೆ ಸಂಯುಕ್ತ ಕರ್ನಾಟಕ

೨) ಬೊಂಬಾಯಿಯನ್ನು ಒಳಗೊಂಡಂತೆ ಸಂಯುಕ್ತ ಮಹಾರಾಷ್ಟ್ರ ಹಾಗೂ

೩) ತೆಲಂಗಾಣವನ್ನು ಒಳಗೊಂಡಂತೆ ವಿಶಾಲಾಂಧ್ರ ರಾಜ್ಯಗಳ ರಚನೆಗೆ ಬೇಕಾದ ೨/೩ ರಷ್ಟು ಬಹುಮತವನ್ನು ಒದಗಿಸಿಕೊಡುವುದಾಗಿ ಸರ್ಕಾರಕ್ಕೆ ಭರವಸೆ ಕೊಡುವದರಲ್ಲಿ ಯಶಸ್ವಿಯಾಗಿದ್ದವು. ಪಾರ್ಲಮೆಂಟಿನಲ್ಲಿ ರಾಜ್ಯ ಪುನರ ವಿಂಗಡಣೆ ಆಯೋಗದ ವರದಿಯನ್ನು ೨೫-೮-೧೯೫೬ರಂದು ಒಪ್ಪಿಕೊಂಡ ಮೇಲೆ ಮತ್ತು ೩೦-೮-೧೯೫೬ ರಂದು ಅದು ಅನುಷ್ಠಾನಗೊಂಡ ಮೇಲೆ ಕರ್ನಾಟಕ ರಾಜ್ಯವು ಹೈದರಾಬಾದ ಕರ್ನಾಟಕದ ಬೀದರ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳನ್ನು ಒಳಗೊಂಡಂತೆ 'ವಿಶಾಲ ಮೈಸೂರ' ಎಂಬ ನಾಮಾಂಕಿತದಲ್ಲಿ ೧ನೇ ನವೆಂಬರ್ ೧೯೫೬ ರಂದು ಅಸ್ತಿತ್ವಕ್ಕೆ ಬಂತು.

**ರಾಜ್ಯಕ್ಕೆ ಮರು ನಾಮಕರಣ:**

ಫಜಲ ಅಲಿ ಆಯೋಗವು ಕನ್ನಡಿಗರಿಗಾಗಿ ರಚನೆಯಾಗುವ ರಾಜ್ಯವನ್ನು ಕರ್ನಾಟಕ ಎಂದು ಕರೆಲಾಯಿತು. ಜನತೆಯ ಮನೋಭಿಲಾಷೆಯೂ ಇದೆ ಆಗಿತ್ತು. ಹೊಸ ರಾಜ್ಯವನ್ನು ಕರ್ನಾಟಕವೆಂದೇ ಕರೆಯಬೇಕೆಂದು ಕನ್ನಡ ಕುಲ ಪುರೋಹಿತ ಆಲೂರ ವೆಂಕಟರಾಯರ ಬದುಕಿನ ಮಹತ್ವಕಾಂಕ್ಷೆಯೂ ಇದೆ ಆಗಿತ್ತು. ಏಕೆಂದರೆ ಕರ್ನಾಟಕವು ಕನ್ನಡಿಗರ ಏಕತೆಯ ಹಾಗೂ ಅವರ ಸಂಸ್ಕೃತಿಯ ಅಭಿವ್ಯಕ್ತಿಯಾಗಿತ್ತು. ದೇಶಿಯ ಸಂಸ್ಥಾನದ ಅಭಿವ್ಯಕ್ತಿಯಾದ ಮೈಸೂರಿನ ಬಗ್ಗೆ ಸ್ವಾತಂತ್ರ್ಯ ಯೋಧರಿಗೆ ಸಂತೋಷ ವಿರಲಿಲ್ಲ. ಆದರೆ ಹಳೆ ಮೈಸೂರು ಭಾಗದ ಧುರೀಣರಿಗೆ 'ಮೈಸೂರು' ಎಂಬ ಹೆಸರಿನ ಬಗ್ಗೆ ಭಾವನಾತ್ಮಕ ಮೋಹವಿತ್ತು. ಕೇಂದ್ರ ಸರಕಾರವು ಹಳೆ ಮೈಸೂರಿನ ಜನತೆಯನ್ನು ಹಾಗೂ ಮೈಸೂರ ಮಹಾರಾಜರ ಮನ ನೋಯಿಸಲು ಸಿದ್ಧ ವಿರಲಿಲ್ಲಿ ಇದರಿಂದಾಗಿ ಪಾರ್ಲಿಮೆಂಟನಲ್ಲಿ ಮೈಸೂರ ಎಂಬ ಹೆಸರಿಗೆ ಹೆಚ್ಚು ಬೆಂಬಲವಿತ್ತು.

ಆದರೆ ೧ನೇ ನವೆಂಬರ ೧೯೭೩ ರಲ್ಲಿ ದೇವರಾಜ ಅರಸರವರು ಮುಖ್ಯಮಂತ್ರಿಯಾಗಿ, ಅಧಿಕಾರದಲ್ಲಿದ್ದಾಗ, "ಮೈಸೂರು ರಾಜ್ಯವನ್ನು ಕರ್ನಾಟಕವೆಂದು ಪುನರನಾಮಕರಣ ಮಾಡಲಾಯಿತು. ಇದು ಏಕೀಕರಣಾ ಚಳುವಳಿಯ ಪರಿಸಮಾಪ್ತಿಗೊಂಡ, ಘಟನೆಯ ಸಂಕೇತವಾಯಿತು."[೬] ಅರಸು ಸರಕಾರದ ಈ ಕ್ರಮವು ಏಕೀಕರಣಕ್ಕಾಗಿ ಹೋರಾಟ ಮಾಡಿದವರಿಗೆ ಸಲ್ಲಿಸಿದ ಗೌರವದ ಸಂಕೇತವಾಗಿತ್ತು. ಮತ್ತು ಇಂದಿನ ಜನಾಂಗಕ್ಕೆ ಕರ್ನಾಟಕ ಸಂಸ್ಕೃತಿ ಹಾಗೂ ಭಾಷೆಯನ್ನು ಸಮೃದ್ಧವಾಗಿ ಬೆಳೆಯಲು ಸ್ಪೂರ್ತಿಯ ಸಂಕೇತವಾಯಿತು.

ನಿಜಾಮನ ಸರ್ವಾಧಿಕಾರಿ ಆಳ್ವಿಕೆಯ ವಿರುದ್ಧದ ಸುದಿರ್ಘಹೋರಾಟದ ನಂತರ ಹೈದರಾಬಾದ ಕರ್ನಾಟಕದ ಜನತೆಗೆ ತಮ್ಮ ತಾಯಿನಾಡಿನ ಜೊತೆ ವಿಲೀನಗೊಂಡ ಹಾಗೂ ಒಂದೆ ಸಾಂಸ್ಕೃತಿಕ ಭಾಷಾ ಪರಂಪರೆಯುಳ್ಳ ರಕ್ತ ಸಂಬಂಧಿಗಳ ಜೊತೆ ಸೇರಿಕೊಂಡ ಸಮಾಧಾನ ಉಂಟಾಯಿತು.

ಈ ರೀತಿಯಾಗಿ ನಡೆದ ಏಕೀಕರಣ ಚಳುವಳಿಯಲ್ಲಿ ಹಲವಾರು ಜಿಲ್ಲೆಗಳಿಗಿಂತ ಹೆಚ್ಚಿನ ಹೋರಟವನ್ನು ಬೀದರ ಜಿಲ್ಲೆಯಲ್ಲಿ ಕಂಡಿದ್ದೆವೆ. ಅದರಲ್ಲೂ ರಾಜ್ಯದ ತಾಲ್ಲೂಕಗಳ ವಿಷಯಕ್ಕೆ ಬಂದಾಗ ಬೀದರ ತಾಲ್ಲೂಕಿನ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ಏಕೀಕರಣ ಚಳುವಳಿಯಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸಿದ್ದಾರೆ. ಅದರಲ್ಲು ರಂಗನಾಥರಾವ್ ಸಾಯಗಾಂವಕರ, ಅಪ್ಪಾರಾವ ಶೆಟಕಾರ, ಕೆ.ಎಸ್.ರಾಜ ಮಾಸ್ತಾರ. ಮುರಳೀಧರರಾವ ಕಾಮತಿಕರ ಮುಂತಾದ ಹೋರಾಟಗಾರರು. ಈ ಏಕೀಕರಣ ಚಳುವಳಿಯಲ್ಲಿ ನಿಸ್ವಾರ್ಥಮನೋಭಾವದಿಂದ ತಮ್ಮ ತನು-ಮನ-ಧನವನ್ನು ಸರ್ಮಪಿಸಿ. ಬೀದರ ತಾಲ್ಲೂಕಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಎನ್ನುವ ಅಂಶವು ಈ ಸಂಶೋಧನೆಯಿಂದ ತಿಳಿದುಕೊಳ್ಳಲಾಗಿದೆ.

# ಅಡಿ ಟಿಪ್ಪಣಿಗಳು

೧) ಸಂಗಮೇಶ ಸವದತ್ತಿಮಠ – ಕನ್ನಡ ಭಾಷಾ ಸ್ವರೂಪ ಪು – ೩೫

೨) ಮಹಾಬಲೇಶ್ವರಪ್ಪಾ ಬಿ.ಸಿ.ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು ಪು–೧೩೦.

೩) ಅಶ್ವತಪ್ಪಾ. ಕೆ. ಎನ್. ಇತಿಹಾಸ ದ್ವಿತಿಯ ಪಿ.ಯು.ಸಿ ಪು – ೩೯೦

೪) ಮಹಾಬಲೇಶ್ವರಪ್ಪಾ ಬಿ.ಸಿ.ಹೈದರಾಬಾದ ಕರ್ನಾಟಕ ರಾಜಕೀಯ ಚಳುವಳಿಗಳು ಪು–೧೩೩.

೫) ಅದೇ ಪು – ೧೩೫

೬) ಅದೇ ಪು – ೧೩೯

೭) ಅದೇ ಪು – ೧೪೦

೮) ಅಪರಂಜಿ ಎನ್.ಆರ್. ಇತಿಹಾಸ ದ್ವಿತಿಯ ಪಿ.ಯು.ಸಿ ಪು – ೧೮೨.

# ಅಧ್ಯಾಯ – ೮

# ಬೀದರ ತಾಲ್ಲೂಕಾ ಸ್ವಾತಂತ್ರ್ಯ ಹೋರಾಟಗಾರರು

**ಪೀಠಿಕೆ:**

ನಮ್ಮ ಹೈದರಾಬಾದ ಸಂಸ್ಥಾನವನ್ನು ನಿಜಾಮನ ಸಂಕೋಲೆಯಿಂದ ಮತ್ತು ಕರ್ನಾಟಕವನ್ನು ಏಕೀಕರಣಗೊಳಿಸಲು ಹಲವಾರು ನಾಯಕರು ರೂಪಿಸಿದ ಚಳುವಳಿಗಳಲ್ಲಿ ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯ ಹೋರಾಟಗಾರರು ಒಂದಲ್ಲ ಒಂದು ರೀತಿಯಲ್ಲಿ ತ್ಯಾಗಮಯ ದೃಷ್ಟಿಯಿಂದ ಸಕ್ರಿಯವಾಗಿ ಭಾಗವಹಿಸಿದ್ದಾರೆ.

ರಾಷ್ಟ್ರೀಯತೆಯ ಚಳುವಳಿ ಒಕ್ಕೂಟ ಸೇರಿ ಚಳುವಳಿ ಭಾಷಾವಾರು ಪ್ರಾಂತ ಚಳುವಳಿ ಮತ್ತು ರಜಾಕಾರ ಹಾವಳಿಯನ್ನು ನಿಯಂತ್ರಿಸಲು, ನಡೆದ ಹಲವಾರು ಹೋರಾಟಗಳಲ್ಲಿ ಹೈದರಾಬಾದ ಕರ್ನಾಟಕದ ಬೀದರ ಜಿಲ್ಲೆಯ ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಹೈದ್ರಾಬಾದ ನಿಜಾಮ ಸರಕಾರದ ವಿರುದ್ಧ ಹೋರಾಡಿ ಅವನ ದಾಸ್ಯದಿಂದ ವಿಮೋಚನೆಗೊಳಿಸುವಲ್ಲಿ ಬೀದರ ತಾಲ್ಲೂಕಿನ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ಕಾರಣಿಕರ್ತರಾಗಿದ್ದಾರೆ.

ಹೈದರಾಬಾದ ಸಂಸ್ಥಾನಕ್ಕೆ ಒಳಪಟ್ಟಿದ್ದ ಬೀದರ ಜಿಲ್ಲೆಯ ಬೀದರ ತಾಲ್ಲೂಕಿನ ಜನತೆ. ಹೈದರಾಬಾದ ಕರ್ನಾಟಕದಲ್ಲಿ ನಡೆದ ನಿಜಾಮ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿ ಅನೇಕ ಚಳುವಳಿಗಳನ್ನು ಮಾಡಿ ನಿಜಾಮನ ಆಡಳಿತ ಸರಕಾರವನ್ನು ಸ್ಥಗಿತಗೊಳಿಸಿದರು.

ಸ್ವಾತಂತ್ರ್ಯ ಹೋರಾಟಗಾರರು ಮಾಡಿದಂತಹ ಸಾಧನೆ, ಅವರು ಅನುಭವಿಸಿ ಕಷ್ಟ-ನಷ್ಟಗಳನ್ನು, ನಿಜಾಮನ ಆಡಳಿತದ ವಿರುದ್ಧ ಕೈಗೊಂಡ ದಮನ ಕಾರ್ಯ ಚಟುವಟಿಕೆಗಳು ಹಾಗೂ ಅನುಭವಗಳನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ನಿಜಾಮನ ದಾಸ್ಯದಿಂದ ವಿಮೋಚನೆ ಮತ್ತು ಕರ್ನಾಟಕವು ಏಕೀಕೃತ ಹೊಂದಲು ಹೈದರಾಬಾದ ಕರ್ನಾಟಕದಲ್ಲಿ ನಡೆದ ನಿಜಾಮ ವಿರುದ್ಧ ಕಾರ್ಯ ಚಟುವಟಿಕೆಗಳಲ್ಲಿ ಬೀದರ ತಾಲೂಕಿನ ಅನೇಕ ಮಹಾನವೀರರು (ಮಹನೀಯರು) ಪಾಲ್ಗೊಂಡಿದ್ದರು. ಹಾಗೇ ಪಾಲ್ಗೊಂಡ ಕೆಲವೇ ಕೆಲವು ಆಯ್ದು ಪ್ರಮುಖ ವ್ಯಕ್ತಿಗಳನ್ನು ಕುರಿತು ಅವರ ಜೀವನ ಹೋರಾಟ ಮತ್ತು ಸಾಧನೆ ಮುಂತಾದ ಕಾರ್ಯ ಚಟುವಟಿಕೆಗಳನ್ನು ಪರಿಚಯಿಸಲಾಗಿದೆ.

೧) ಅಪ್ಪಾರಾವ ಶೆಟಕಾರ:

ಅಪ್ಪಾರಾವ ಶೆಟಕಾರರು. ೧೯೧೭ ರಲ್ಲಿ ನಾರಾಯಣಖೇಡದಲ್ಲಿ ಜನಿಸಿದರು. ಅವರ ತಂದೆಯ ಹೆಸರು ರಾಮಶೆಟ್ಟಿ ಅಪ್ಪಾರಾವರು. ಬೀದರಿನಲ್ಲಿ ಮೆಟ್ರಿಕ್ಯೂಲೇಶನದವರೆಗೆ ಕಲಿತರು ಮತ್ತು ೧೯೩೮ರಲ್ಲಿ ಅವರು ಕಾನೂನು ವಿಷಯದಲ್ಲಿ ಡಿಪ್ಲೋಮಾ ಪಡೆದರು.

ಹೈದರಾಬಾದಿನಲ್ಲಿ ಅವರು ಕಾನೂನು ಶಿಕ್ಷಣ ಪಡೆಯುತ್ತಿರುವಾಗಲ್ಲೇ ಮುರಳೀಧರಾವಕಾಮತಕಿರೊಂದಿಗೆ ಹಾಗೂ ಹೈದರಾಬಾದ ಸಂಸ್ಥಾನದ ವಿಮೋಚನಾ ಚಳುವಳಿಯಲ್ಲಿ ಸ್ಟೇಟಕಾಂಗ್ರೆಸ್ಸಿನ ಸ್ಥಾಪಕ ಅಧ್ಯಕ್ಷರಾಗಿದ್ದ ರಾಮಾನಂದ ತೀರ್ಥರೊಂದಿಗೆ ಸಂಪರ್ಕ ಬೆಳೆಸಿಕೊಂಡರು. ತತ್ಪರಿಣಾಮವಾಗಿ ಅವರು ಆಗಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು.

"ಹೈದರಾಬಾದದ ನಿಜಾಮನ ದುರಾಡಳಿತವನ್ನು ಅಂತ್ಯಗೊಳಿಸಿ ಹೊಣೆಗಾರ ಸರ್ಕಾರವನ್ನು ನಿರ್ಮಿಸುವ ಸಲುವಾಗಿ ಅಪ್ಪಾರಾವ ಶೆಟಕಾರರು ರಾಮಾನಂದತೀರ್ಥರ ಜೊತೆಗೆ ಸತ್ಯಾಗ್ರಹದಲ್ಲಿ ಭಾಗವಹಿಸಿದರು."೧ ಅದಕ್ಕಾಗಿ ಅವರಿಗೆ ೬ ತಿಂಗಳುಗಳ ಕಾಲ ಸಶ್ರಮ ಶಿಕ್ಷೆಯಾಯಿತು. ಅವರನ್ನು ವರಂಗಲ್ ಕಾರಾಗೃಹಕ್ಕೆ ಕಳಿಸಲಾಯಿತು.

ಬಿಡುಗಡೆಯ ನಂತರ ಬಾಪರಾವ ದೇಶಪಾಂಡೆಯವರ ಮಾರ್ಗದರ್ಶನದಲ್ಲಿ "ಬೀದರದಲ್ಲಿ ದುಲ್ಹನ್ ದರವಾಜಾದ ಹತ್ತಿರ ನಡೆದ ಕರ್ನಾಟಕ ಪ್ರಾಂತಿಯ ಪರಿಷತ್ತಿನ ಎರಡನೇ ಸಮ್ಮೇಳನದಲ್ಲಿ ಅಪ್ಪಾರಾವ ಪಾಟೀಲರು ಸಕ್ರಿಯವಾಗಿ ಭಾಗವಹಿಸಿದ್ದರು."೨

ಕಾಂಗ್ರೇಸ್ ಅಧಿವೇಶನದಲ್ಲಿ ಭಾಗವಹಿಸುವುದಕ್ಕಾಗಿ ೧೯೪೬ರಲ್ಲಿ ನಿಜಾಮ ಸರ್ಕಾರವು ಅವರನ್ನು ಬಂಧಿಸುವ ಸಲುವಾಗಿ ವಾರಂಟು ಹೂರಡಿಸಿದರು. ಆದ್ದರಿಂದ ಅವರು ಪೋಲಿಸ್ ಕಾರ್ಯಾಚರಣೆಯ ವರೆಗೆ ಅಂದರೆ ಸಪ್ಟೆಂಬರ ೧೭-೧೯೪೮ ವರೆಗೆ ಭೂಗತವಾಗಿಯೇ ಉಳಿದರು. ಅವರು ಹೈದರಾಬಾದ ಬಂಧ ವಿಮೋಚನೆಗಾಗಿ ಸೋಲಾಪೂರ ಕ್ಯಾಂಪಿನಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ೨೦-೦೫-೧೯೭೪ ರಂದು ಹೃದಯ ಘಾತದಿಂದ ನಿಧನರಾದರು.

೨) ಕೆ.ಎಸ್.ರಾಜ ಮಾಸ್ತರ

ಸುಮಾರು ೧೮೬೩ನೇ ಇಸ್ವಿಯಲ್ಲಿ ಜನಿಸಿದ ಕೋಮನಹಳ್ಳಿ ರಂಗಚಾರ್ಯರ ಮಗ ಶ್ರೀಪಾದರಾಯ ಮುಂದೆ. ಕೆ.ಎಸ್.ರಾಜ ಕನ್ನಡ ಮಾಸ್ತರರೆಂದು ಖ್ಯಾತರಾದರು ೧೯೧೦ ರಲ್ಲಿ. ಎಸ್.ಎಸ್.ಎಲ್.ಸಿ. ಪಾಸಾದ ರಾಜರು. ಪಿ.ಆರ್.ರಾಮಯ್ಯ ತಿ.ತಾಶರ್ಮ. ತಗಡೂರು. ಭಾಷ್ಯಾಂರ. ಜೊತೆ ಸೇರಿ ರಾಷ್ಟ್ರೀಯ ಚಟುವಟಕೆಯಲ್ಲಿ ತೂಡಗಿದ್ದರು. ಮುಂದೆ ಖಾದಿ ಪ್ರಚಾರ ಸ್ವಾತಂತ್ರ್ಯ ಪ್ರಾಪ್ತಿ

– ಆರ್ಯಸಮಾಜದ ಬೆಳವಣಿಗೆ ಮತ್ತು ಕನ್ನಡ ಅಭಿವೃದ್ಧಿಗಾಗಿ ಕಂಕಣಬದ್ಧರಾಗಿ ದುಡಿದರು. ತಂದೆ ತನ್ನ ಮಗ ಕುಲಗೆಟ್ಟನು ಎಂದು ಬಹಿಷ್ಕಾರ ಹಾಕಿ ಮನೆಯಿಂದ ಹೊರಗೆಟ್ಟಿದರು. ಹೀಗೆ ಅವರು ಪಿತ್ರಾರ್ಜಿತ ಆಸ್ತಿಯಿಂದಲೂ ವಂಚಿತರಾದರು.

ಮೈಸೂರು ರಾಜ್ಯದಲ್ಲಿ ಸ್ವಾತಂತ್ರ್ಯ ಚಳುವಳಿ ಕೈಕೊಂಡದ್ದಕ್ಕಾಗಿ ರಾಜ್ಯದಿಂದ ಅವರಿಗೆ ಗಡಿಪಾರು ಮೊದಲಾಯಿತು. "ಅಂತೆಯೇ ಅವರು ೧೯೪೦ ರಲ್ಲಿ ಮೈಸೂರು ರಾಜ್ಯವನ್ನು ತೊರೆದು ಹೈದ್ರಾಬಾದ ರಾಜ್ಯವನ್ನು ತಮ್ಮ ಸ್ವಾತಂತ್ರ್ಯ ಚಳುವಳಿಯ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಂಡರು."[೩]

ಹೈದರಾಬಾದ ರಾಜ್ಯದಲ್ಲಿ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳ ಪ್ರಚಾರ ನಡೆಸುತ್ತಿದ್ದ ಆ ಕಾಲದಲ್ಲಿ ಆರ್ಯ ಸಮಾಜ ತಲೆಯೆತ್ತಿತ್ತು. ಅದೇ ಅವಧಿಯಲ್ಲಿ ಅವರು ಹೈದರಾಬಾದಿನ ಸುಲ್ತಾನ ಬಜಾರದಲ್ಲಿ ಶಾರದಾ ಕನ್ಯಾ ಕನ್ನಡ ಶಾಲೆ ಪ್ರಾರಂಭಿಸಿದರು. ಅದೇ ಶಾಲೆಯಿಂದ ಅವರ ಅತ್ತಿಗೆ ಕಮಲಾಬಾಯಿ ೧೯೪೮ರಲ್ಲಿ ಹೈಯರ್ ಸೆಕಂಡರಿ ಪಾಸಾದರು.

ಮುಂದೆ ಅವರು ಹೈದರಾಬಾದ ಬಿಟ್ಟು ಬೀದರ ಜಿಲ್ಲೆಯನ್ನು ತಮ್ಮ ಹೋರಾಟದ ಕೇಂದ್ರವಾಗಿಸಿಕೊಂಡು ಕನ್ನಡ ಪ್ರಚಾರ, ಆರ್ಯಸಮಾಜ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಕೊಂಡುವರು. ದಲಿತರನ್ನು ಮತಾಂತಗೊಳ್ಳದಂತೆ ತಡೆಟ್ಟಿದರಲ್ಲದೆ, ಬೀದರಿನಲ್ಲಿ ಉರ್ದು ಮರಾಠಿಗಳ ಮಧ್ಯೆ ಕನ್ನಡ ಉಸಿರಾಡುವಂತೆ ಮಾಡಿದರು. ಮಂಗಲ ಪಟ್ಟದ ಮಡಿವಾಳಪ್ಪನ ಗುಡಿಯ ಹತ್ತಿರ ಕನ್ನಡ ಶಾಲೆ ಪ್ರಾರಂಭಿಸಿ ತಾವು ಶಿಕ್ಷಕರಾಗಿ ದುಡಿದರು. ಆಗ ಮೋನಪ್ಪಾ ಪಂಚಾಳ, ವಿಠಲರಾವ ಕುಲಕರ್ಣಿ ಚೆಳಕೇರಿ ಶಂಕರರಾವ, ಕಮಲಾಬಾಯಿ ಭಾರತೇಶ, ಇವರೆಲ್ಲಾ ಶಿಕ್ಷಕರಾಗಿದ್ದರು. ಇದೇ ಶಾಲೆ ಕರ್ನಾಟಕ ರಾಷ್ಟ್ರೀಯ ಸಂಸ್ಥೆಯಾಗಿ ಬೆಳೆಯಿತು. ೧೯೪೭ರಲ್ಲಿ ಚಲೇಜಾವ್ ಚಳುವಳಿಯಲ್ಲಿ ಭಾಗ ವಹಿಸಿದ್ದರಾಗಿ ಸರಕಾರ ಅವರನ್ನು ಬಂಧಿಸಿತಲ್ಲದೇ ಜೈಲಿನಲೇ ವಿಚಾರಣೆಮಾಡಿ ಮೂರು ವರ್ಷಶಿಕ್ಷೆಯನ್ನು ವಿಧಿಸಿತು. ಮೊದಲು ಮೂರು ತಿಂಗಳು ಬೀದರ ಜೈಲಿನಲ್ಲಿಟ್ಟು ಆಮೇಲೆ ಕಲಬುರ್ಗಿ ಕೇಂದ್ರ ಕಾರಾಗೃಹಕ್ಕೆ ರವಾನಿಸಲಾಯಿತು. ಅವರು ಶಾಮಲಾಲ ಬನ್ಸಿಲಾಲರೊಂದಿಗೆ ನಿಕಟವರ್ತಿಗಳಾಗಿದ್ದರು.

"೧೯೪೭ ಅಗಷ್ಟ ೦೭ರಂದು ದೊಡ್ಡ ಹಳ್ಳಿಖೇಡದಲ್ಲಿ ಸತ್ಯಾಗ್ರಹ ನಡೆಸಿದಾಗ ನಿಜಾಮ ಪೋಲಿಸರು ಹಾಗೂ ರಜಾಕಾರರು ಇವರ ಮುಖದ ಮೇಲೆ ಕಲ್ಲಿನಿಂದ ಜಜ್ಜಿ ಮೂವತ್ತೆರಡು ಹಲ್ಲುಗಳನ್ನು ಕೆಡವಿದರು."[೪] ಅವರ ಜೊತೆಯಲ್ಲಿ ಶ್ರೀನಿವಾಸರಾವ ಎಕ್ಕಳ್ಳಿಕರ, ಮುರಳಿಧ್ಧರ ಕಾಮತಿಕರ ಬಾಪುರಾವ ದೇಶಪಾಂಡೆ, ಕೇಶವರಾವ ನಾನಾಸಾಹೇಬ ವಕೀಲ ಜೇಲಿನಲ್ಲಿದ್ದರು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಆರ್.ಪಿ ಬೀಡಪ ಮಾಣಿಕರಾವ ಪುಲೇಕರ, ಶಂಕರಪಾಪಟ,

ಶಂಕರದೇವ ಇವರ ಗರಡಿಯಲಿ ಕಸರತ್ತು ಮಾಡಿದ್ದಾರೆ. ರಂಗನಾಥರಾವ ಸಾಯಗಾಂವಕರ ಇವರ ಆರ್ಯ ಸಮಾಜದ ಮತ್ತು ಸ್ವಾತಂತ್ರ್ಯ ಹೋರಾಟಗಳ ಸಂಗಾತಿಯಾಗಿದ್ದರು.

ಸಮಾಜ ಸೇವಕರಾದ ಅವರು ಆಶಾಯಿಯೆಂಬ ವಿಧವೆ ಯೊಂದಿಗೆ ಮದುಯಾಗಿ ಗೊಳ್ಳು ಸಂಪ್ರದಾಯಕ್ಕೆ ಕೊಡಲಿಯೇಟ್ಟು ಹಾಕಿದರು. ಅವರ ಪತ್ನಿ ಬಾಲವಾಡಿ ಶಿಕ್ಷಕಿಯಾಗಿದ್ದರು. ತಮ್ಮನಾದ ಬಾರತೇಶನಿಗೆ ದಲಿತ ಮಹಿಳೆಯೊಂದಿಗೆ ಮದುವೆಮಾಡಿ ಪ್ರಗತಿ ಶೀಲರೂ ಅನಿಸಿದ್ದರು. ರಾಜ್ಯ ಪುನರ್ವಿಂಗಡಣೆಯ ಕಾಲಕ್ಕೆ ಬೀದರ ಕರ್ನಾಟಕಕ್ಕೆ ಸೇರಬೇಕೆಂದು ಆಗ್ರಹಿಸಿ ಕಮಲ ನಗರದಲ್ಲಿ ರೇಲ್ ರೋಕೋ ಸತ್ಯಾಗ್ರಹ ಮಾಡಿದರು. ಮುಡುಬಿಯಲ್ಲಿರುವಾಗ ಅವರು ಕನ್ನಡ ಅಧ್ಯಯನ ಬಳಗವೊಂದನ್ನು ರಚಿಸಿದರು. ಕನ್ನಡವನ್ನು ಅಪಮಾನಿಸಿದರೆ ಅವರು ಕೆರಳಿದ ಸಿಂಹವಾಗುತ್ತಿದ್ದರು. ಕೆ.ಎಸ್. ರಾಜ ಮಾಸ್ತರರ ಆತ್ಮ ಜ್ಯೋತಿಯು ೦೫-೦೫-೧೯೭೩ರಲ್ಲಿ ಅನಂತದಲ್ಲಿ ಲೀನವಾಯಿತಾದರೂ ಅವರ ಹೋರಾಟವು ಅಮರವಾಗಿದೆ.

## ಗುರಪ್ಪ ಲಾಡಗೇರಿ

ಔರಾದ ತಾಲ್ಲೂನಿನ ನಾಗಮಾರಪಳ್ಳಿಯ ಗುರಪ್ಪ ಲಾಡಗೇರಿಯವರು ಇವರ ತಂದೆ ಸಂಗಪ್ಪ ತಾಯಿ ಗುಂಡಮ್ಮ ಆಸ್ತಿಗಾಗಿ ಗುರುಪ್ಪನವರ ತಂದೆ ಕೊಲೆಯಾದರಿಂದ ತಾಯಿ ಗುಂಡಮ್ಮ ತನ್ನ ಮೂರು ಮಕ್ಕಳಪೋಷಣೆಗಾಗಿ ಆಂದ್ರಪ್ರದೇಶದ ಜೂಕಲಕ್ಕೆ ನಂತರ ಹಂಗರಿಗಿಗೆ ವಲಸೆ ಹೋದಳು. ನಂತರ ಬೀದರಗೆ ಬಂದು ನೆಲೆಸಿದಳು. ಬಾಲ್ಯದಲ್ಲಿ ಅಂಗಡಿಯೊಂದರಲ್ಲಿ ಧ್ಯಾನ್ಯತೂಕ ಮಾಡುತ್ತಿದ್ದ ಗುರಪ್ಪನವರು ಹನ್ನೊಂದು ವರ್ಷದವರಾದಾಗ ಶಾಲೆ ಸೇರಿದರು. ಅವರು ಉರ್ದು ಮಾಧ್ಯಮದಲ್ಲಿ ಏಳನೆಯ ವರ್ಗದವರೆಗೆ ಶಿಕ್ಷಣ ಪಡೆದರು.

ಇವರ ಮನೆಯ ಹತ್ತಿರ ಸಂಜೀವರಾವ ಎಂಬುವರಿದ್ದರು. ಅವರ ಮನೆಗೆ ಲಾಹೋರದಿಂದ ಆರ್ಯ ಸಮಾಜದ ಪತ್ರಿಕೆಗಳು ಹಾಗೂ ಗ್ರಂಥಗಳು ಬರುತ್ತಿದ್ದವು ಅವುಗಳನ್ನು ಕೂತುಹಲದಿಂದ ಒದಿದ ಬಾಲಕ ಗುಂಡಪ್ಪನವರ ಮೇಲೆ ಆರ್ಯ ಸಮಾಜದ ತತ್ವಗಳು ಪ್ರಭಾವ ಬೀರಿದವು ಅದರಂತೆ ಸ್ವಾತಂತ್ರ್ಯ ಸೇನಾನಿ ಬ್ರೀಜ ಪಾಲಸಿಂಗ ಒಡನಾಟದಲ್ಲಿ ಅವರು ಆರ್ಯ ಸಮಾಜದ ಚಟುವಟಿಕೆಯಲ್ಲಿ ಪತ್ಯಕ್ಷವಾಗಿ ಭಾಗವಹಿಸಿದರು.

೧೯೩೭-೩೮ರಲ್ಲಿ ಗುರಪ್ಪನವರು ಹೈದರಾಬಾದಿನಲ್ಲಿ ಒರುಗಿದ ಆರ್ಯಸಮಾಜದ ಚಳುವಳಿಯಲ್ಲಿ ಪಾಲ್ಗೊಂಡರು. ಆಗಿನ್ನೂ ಅವರು ಒಂಬತ್ತನೇ ವರ್ಗದ ವಿದ್ಯಾರ್ಥಿಗಳಾಗಿದ್ದರು. ಮುಂದೆ ವಿದ್ಯಾಭ್ಯಾಸ ಮಾಡಲು ದುಸ್ಸಾಧ್ಯವಾದ ಕಾರಣ ನಿಜಾಮ ಸೇನೆಯಲ್ಲಿ ಭರ್ತಿಯಾಗಿ ೧೯೪೧ ರಿಂದ ೧೯೪೭ ರವರೆಗೆ ಸೇವೆ ಸಲ್ಲಿಸಿದರು. ಮುಂದೆ ೧೯೪೭ರಲ್ಲಿ ನಿಜಾಮ ಭಾರತದ –

–ಒಕ್ಕೂಟವನ್ನು ಸೇರದೆ ಹೋದಾಗ ಅವನ ವರ್ತನೆಯಿಂದ ಬೇಜಾರಗೊಂಡು ಅವರ ಸೈನ್ಯತ್ಯಜಿಸಿ "ಹೈದ್ರಾಬಾದ ವಿಮೋಚನಾ ಚಳುವಳಿಯಲ್ಲಿ ಬೂಗತರಾಗಿ ಕೆಲಸ ಮಾಡತೊಡಗಿದರು. ಚೂಡಿದಾರ ಪೈಜಾಮ ಸೇರವಾನಿ ರೂಮಿ ಟೋಪಿ ಧರಿಸಿ ಓಡಾಡುತ್ತಿದ್ದರಿಂದ ಅವರು ಬಂಧನಕ್ಕೆ ಒಳಗಾಗದೆ ಉಳಿದರು."೫ ಕಾಂಗ್ರೇಸ ಪಕ್ಷದ ಸದಸ್ಯರಾಗಿ ರಜಾಕಾರರ ವಿಧ್ವಂಸಕ ಕೃತ್ಯಗಳಿಗೆ ವಿರೋಧಿಸಿ ಅದರ ವರಧಿಯನ್ನು ಕಾಂಗ್ರೇಸಗೆ ಒಪ್ಪಿಸುತ್ತಿದ್ದರು.

ಬ್ರಿಜಪಾಲಸಿಂಗ್ ಹಾಗೂ ಇತರ ಹೋರಾಟಗಾರರೊಂದಿಗೆ ಭಾರತ ಸೈನ್ಯದಿಂದ ಪಡೆದ ಬಾಂಬನ್ನು ಹೈದ್ರಾಬಾದಿನ ಅಬದ್ ಪೋಲಿಸ್ ಸ್ಟೇಷನ್ ಹಾಗೂ ಬಿಜಾಪೂರದ ಅರಮನೆಯಾದ ಚಿಂಗಕೋಟೆಯ ಮೇಲೆ ಎಸೆದರು. ತತ್‌ಪರಿಣಾಮವಾಗಿ ಇವರ ಅಣ್ಣ ನಾಗಪ್ಪನವರನ್ನು ಮೋನಪ್ಪ ಸುತಾರರನ್ನು ಪೋಲಿಸರು ಹಿಡಿದು ಬಂಧಿಸಿದರು. ಇತರ ಹೋರಾಟ ಗಾರರು ಸುಳಿವನ್ನು ಕೊಡಲು ಇವರಿಗೆ ಪೋಲಿಸರು ಪರಿಪರಿಯಾಗಿ ಚಿತ್ರಹಿಂಸೆ ಕೊಟ್ಟರು. ಈ ಅವಧಿಯಲ್ಲಿ ಬ್ರಜಪಾಲಸಿಂಗರು ಸೋಲಾಪುರಕ್ಕೆ ಹೋದರು. ಆದರೆ ಮಧು ಪಾಠಕ ಎಂಬ ಹೋರಾಟಗಾರೊಂದಿಗೆ ಗುಂಡಪ್ಪನವರನ್ನು ಪೋಲಿಸರು ಸೆರೆಹಿಡಿದರು. ಪೋಲಿಸ ದಿಗ್ಬಂದನದಲ್ಲಿ ಮೂರು ತಿಂಗಳು ಹದಿನೇಳು ದಿನಗಳವರೆಗೆ ಅವರು ಪೋಲಿಸರ ಹೊಡೆತ ಬಡಿತದಿಂದ ತತ್ತರಿಸಿದರೂ ಅವರು ಉಳಿದ ಹೋರಾಟಗಾರರ ಕುರಿತು ಮಾಹಿತಿ ಒದಗಿಸಲೇ ಇಲ್ಲ. ೧೯೪೮ ಸೆಪ್ಟಂಬರ ೧೮ಕ್ಕೆ ಹೈದ್ರಾಬಾದ ಭಾರತ ಒಕ್ಕೂಟ ಸೇರಿತು. ಆದರೆ ಪೋಸಲಿಸ್ ಕಾರ್ಯಾಚರಣೆಯಾದ ಎರಡು ತಿಂಗಳ ನಂತರ ಇವರ ಬಡುಗಡೆಮಾಡಲಾಯಿತು.

ಬೀದರನಲ್ಲಿ ಎರಡು ವರ್ಷ ನಿರುದ್ಯೋಗಿಯಾಗಿ ಅಲೆದನಂತರ ಮತ್ತೆ ಹೈದರಾಬಾದಿನ ಕಾಳೆ. ಇನ್ಸಿಟ್ಯೂಟ್ ಸೇರಿ ಬನಾರಸ ಬೋರ್ಡಿನ ಎಸ್.ಎಸ್.ಎಲ್.ಸಿ ಪಾಸಾದರು. ಪಂಚಾಯತ ಇನ್ಸಪೆಕ್ಟರ ರೆಂದು ನೇಮಕಾತಿ ಹೊಂದಿದ ಅವರು ಪರಭಣಿ, ಗುಲಬರ್ಗಾ ಹಾಗೂ ಬೀದರನಲ್ಲಿ ಸೇವೆ ಸಲ್ಲಿಸಿದರಲ್ಲದೆ ಕೊನೆಗೆ ಬೀದರ ತಾಲ್ಲೂಕಿನ ಬಿ.ಡಿ.ಓ. ಆಗಿ ನಿವೃತ್ತರಾದರು. ಈಗ ಸದ್ಯ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳಿಂದ ಸ್ವಾತಂತ್ರ್ಯ ಸೈನಿಕರೆಂದು ನಿವೃತ್ತಿ ವೇತನ ಪಡೆಯುತ್ತಿದ್ದಾರೆ.

ಇವರ ಅಣ್ಣ ನಾಗಪ್ಪ ಭಾರತೀಯ ಸೇವೆಯಲ್ಲಿ ಸೈನಿಕರಾಗಿ ಕೆಲಸ ಮಾಡಿದಂತೆ, ಇವರ ತಮ್ಮ ಮಾಣಿಕಪ್ಪ ಕೂಡ ಸ್ವಾತಂತ್ರ್ಯ ಯೋಧರಾಗಿ ಗಾಂಧೀಜೀಯವರೊಂದಿಗೆ ನೌಖಾಲಿಯಲ್ಲಿ ಪಾದಯಾತ್ರೆ ಮಾಡಿದ್ದು ಸ್ಮರಣೀಯ. ಹೀಗೆ ಈ ಮೂವರು ಅಣ್ಣ ತಮ್ಮಂದಿರ ಜೀವನ ಅನುಕರಣೀಯವಾಗಿದೆ.

**೩) ಬಸವಂತರಾವ ಶೆಟಕಾರ:**

೧೯೦೨ ರಲ್ಲಿ ಬಸವಂತರಾವ ಶೆಟಕಾರರು ನಾರಾಯಣಖೇಡದಲ್ಲಿ ಜನಿಸಿದರು. ಅವರ ತಂದೆಯ ಹೆಸರು ರಾಮಶೆಟ್ಟೆಪ್ಪ ಶೆಟಕಾರ ಆಗಿತ್ತು. ಅವರು ಕೂಡ ಬೀದರಿನಲ್ಲಿ ತಮ್ಮ ಸಹೋದರ ಅಪ್ಪಾರಾವರಂತೆ ಮೆಟ್ರಿಕ್ಯೂಲೇಶನವರೆಗೆ ಕಲಿತರು. ನಂತರ ೧೯೨೩ ರಲ್ಲಿ ಹೈದರಾಬಾದಿನಲ್ಲಿ ಕಾನೂನು ವಿಷಯದಲ್ಲಿ ಡಿಪ್ಲೋಮಾ ಪಡೆದರು.

ಈ ರೀತಿ ಕಾನೂನು ಶಿಕ್ಷಣ ಪಡೆದ ಬಸವಂತರಾಯ ಶೆಟಕಾರರು ತಮ್ಮ ಅಣ್ಣಂದಿರಾದ ನಾಗಶೆಟ್ಟಿ ಶೆಟಕಾರರ ಜೊತೆಗೆ ನಾರಾಯಣಖೇಡ ಕೋರ್ಟಿನಲ್ಲಿ ವಕೀಲಿ ವೃತ್ತಿ ಕೈಕೊಂಡರು.

"೧೯೩೮ ರಲ್ಲಿ ಅವರು ಬೀದರಿನಲ್ಲಿ ಬಾಪುರಾವ ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಪ್ರಾಂತೀಯ ಪರಿಷತ್ತಿನ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು."[೩]

೧೯ ಮಾರ್ಚ ೧೯೩೮ ರಂದು ಬ್ರಿಜಪಾಲಸಿಂಗರು ಉಸ್ಮಾನಗಂಜಿನಲ್ಲಿ ನಡೆದ ಹೋರಾಟವೊಂದರಲ್ಲಿ ಒಬ್ಬ ಮುಸ್ಲಿಂಮ ಬಾಲಕನಿಗೆ ಗುಂಡಿನಿಂದ ಗಾಯಗೊಳಿಸಿದರು. ಅದೇ ಸಂದರ್ಭ ವಿಕೋಪಕ್ಕೆ ಹೋಗಿ ಹಿಂದೂ ಮುಸ್ಲಿಮರ ನಡುವೆ ಕೋಮು ಗಲಬೆಗೆ ಕಾರಣವಾಯಿತು. ಕೋರ್ಟಿಗೆ ಹೋಗಿ ಎಂದಿನಂತೆ ಸಂಜೆ ೫ ಗಂಟೆಗೆ ಬಸವಂತರಾವ ಶೆಟಕಾರರು ತಮ್ಮ ಮನೆಗೆ ಮರಳುತಿದ್ದಾಗ, ರಾಮಣ್ಣ ಕ್ಯಾಸಾ ಅವರು ಬೀದರಿನ ಉಸ್ಮಾನ ಗಂಜಿನಲ್ಲಿ ನಡೆಯುತಿದ್ದ ಹಿಂದೂ ಮುಸ್ಲಿಮರ ನಡುವೆ ದಂಗೆಯ ವಿಷಯವನ್ನು ಅವರಿಗೆ ತಿಳಿಸಿದರು. ಮಾರ್ಕೆಟಿಗೆ ಹೋದ ತಮ್ಮ ಸಹೋದರ ಅಪ್ಪಾರಾವ ಶೆಟಕಾರರಿಗೆ ಈ ವಿಷಯ ತಿಳಿಸಿ, ಬೀದರಿನ ಪಾಂಡುರಂಗ ಮಂದಿರ ಹತ್ತಿದಲ್ಲಿರುವ ತಮ್ಮ ಮನೆಗೆ ಮರಳುತಿದ್ದ ಬಸವಂತರಾವ ಶೆಟಕಾರರ ಮೇಲೆ, ಕೆಲ ಮುಸ್ಲಿಮರು ದಾಳಿ ಮಾಡಿದರು. ತೀವ್ರಗಾಯಗೊಂಡಿದ್ದ ಬಸವಂತರಾವರನ್ನು ಸರ್ಕಾರಿ ಆಸ್ಪತ್ರೆಗೆ ಸೇರಿಸಲಾಯಿತು. ಆದರೆ ಅದರಿಂದ ಏನೂ ಉಪಯೋಗವಾಗದೆ, ೨೦-೦೩-೧೯೩೯ ರ ಮುಂಜಾನೆ ೧೦ ಗಂಟೆಗೆ ಬಸವಂತರಾವರು ದೈವಾಧೀನರಾದರು.

**೪) ಬ್ರಿಜಪಾಲಸಿಂಗ ಠಾಕೂರ:**

ಬ್ರಿಜಪಾಲಸಿಂಗರ ಮುತ್ತಜ್ಜ ಉತ್ತರ ಪ್ರದೇಶದ ಉನ್ನಾವ ಜಿಲ್ಲೆಯವರಾಗಿದ್ದರು. ತಮ್ಮ ಮೂಲ ಸ್ಥಳವನ್ನು ಬಿಟ್ಟು ದಕ್ಷಿಣದ ಹೈದರಾಬಾದ ನಗರಕ್ಕೆ ಬಂದರು. ಅಲ್ಲಿಂದ ಅವರ ಮಗ ಜೈಪಾಲಸಿಂಗರು ಬೀದರನಲ್ಲಿ ಬಂದು ನೆಲೆಸಿದರು. ಅವರ ಮೊಮ್ಮಗನೇ ಬೀದರನ ಸ್ವಾತಂತ್ರ್ಯ ವೀರ ಬ್ರಿಜಪಾಲಸಿಂಗ ಠಾಕೂರರಾಗಿದ್ದಾರೆ. ಅವರು ೧೩-೮೧೯೨೧ ರಲ್ಲಿ ಬೀದರನಲ್ಲಿ ಜನಿಸಿದರು. ಉರ್ದು ಮಾಧ್ಯಮದಲ್ಲಿ ಏಳನೇ ತರಗತಿಯವರೆಗೆ ಶಿಕ್ಷಣ ಪಡೆದರಲ್ಲದೆ ಸ್ವಾತಂತ್ರ್ಯ ಯೋಧರ ಚರಿತ್ರೆಗಳನ್ನು ಓದುವುದರಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡರು.

ಆರ್ಯ ಸಮಾಜದವರು ನಡೆಸುತ್ತಿದ್ದ ವ್ಯಾಯಮಶಾಲೆಯಲ್ಲಿ ಅವರು ಲಾಠಿ ತಲವಾರ, ಬರ್ಚಿ ಆಯುಧಗಳ ತರಬೇತಿ ಪಡೆದರು. ಅದೇ ಕಾಲಕ್ಕೆ ಹಳ್ಳಿಖೇಡದ ಬನ್ಸಿಲಾಲ ವಕೀಲರ ಉಜ್ವಲ ರಾಷ್ಟ್ರ ಭಕ್ತಿಯ ಭಾಷಣ ಅವರ ಮೇಲೆ ಪರಿಣಾಮ ಬೀರಿದವು.

೧೯೩೮ರ ರಲ್ಲಿ ನಿಜಾಮನ ದುರಾಳಿತದ ವಿರುದ್ಧ ಸತ್ಯಾಗ್ರಹಗಳು ನಡೆದವು. ಬ್ರಿಜಪಾಲಸಿಂಗರು ಆ ಸತ್ಯಾಗ್ರಹಗಳಲ್ಲಿ ಭಾಗವಹಿಸಿದಕ್ಕಾಗಿ ಪೊಲೀಸರು ಅವರನ್ನು ಬಂಧಿಸಿದರು. ಆದರೆ ನ್ಯಾಯಾಲಯದಲ್ಲಿ ಅವರು ಚಿಕ್ಕವರೆಂದು ಬಿಡುಗಡೆ ಮಾಡಿದರು. ಅದೇ ವರ್ಷ ಮಜಲಿಸ್ ಇತ್ತೆಹಾದುಉಲ್ ಮುಸ್ಲಿಮನ್ ಸಂಸ್ಥೆಯ ಬೀದರಿನ ಶಾಲೆಯಲ್ಲಿ ವಾರ್ಷಿಕೋತ್ಸವ ಜರುಗಿತು. ಆ ಸಂದರ್ಭದಲ್ಲಿ "ಬಹಾದ್ದೂರ್‌ಯಾರ್ ಜಂಗರು ಧಾರ್ಮಿಕ ಪ್ರಚೋದನಾತ್ಮಕ ಭಾಷಣ ಮಾಡಿ ರೊಚ್ಚಿಗೆಬ್ಬಿಸಿದರು".೭ ಅದಕ್ಕೆ ಪ್ರತಿಕ್ರಿಯೆ ಎನ್ನುವಂತೆ ಕರ್ನಾಟಕ ಪ್ರಾಂತೀಯ ಪರಿಷತ್ತಿನ ಎರಡನೇ ಸಮ್ಮೇಳನವನ್ನು ಬೀದರನಲ್ಲಿ ನಡೆಸಬೇಕೆಂದದು ಬಾಪುರಾವ ದೇಶಪಾಂಡೆ, ಇಟಕೆಪಲ್ಲಿ ದೇಶಮುಖ, ಶ್ರೀನಿವಾಸರಾವ ಏಖೇಳ್ಳಿಕರ, ಮುಂದಾಗಿ, ಧನಸಂಗ್ರಹ ಮಾಡಿದರು. ಈ ಸಮ್ಮೇಳನಕ್ಕೆ ಸೇಠ ವಿಠಲದಾಸರು ಹೆಚ್ಚು ಧನ ಸಹಾಯ ಮಾಡಿದರು. ೧೯೪೦ ರಲ್ಲಿ ಕರ್ನಾಟಕ ಪ್ರಾಂತೀಯ ಪರಿಷತ್ತಿನ ಸಮ್ಮೇಳನ ಬೀದರನಲ್ಲಿ ಜರುಗಿತು. ಆ ಸಮ್ಮೇಳನಕ್ಕೆ ಮುಖ್ಯ ಅತಿಥಿಗಳಾಗಿ ವಿನಾಯಕರಾವ ವಿದ್ಯಾಲಂಕಾರ, ಜನಾರ್ಧನರಾವ ದೇಸಾಯಿ, ಕಾಶಿನಾಥರಾವ ವೈದ್ಯ, ಸಿರಾಜುಲ ಹಸನ, ತಿರುಮಂಜಿ, ಆರ್.ವಿ.ಬೀಡಪ, ರಾಮಾನಂದ ತೀರ್ಥ ಸಂಗ್ರಾಮಪ್ಪ ವಕೀಲ ಮೊದಲಾದವರು ಬಂದಿದ್ದರು. ಈ ಸಮ್ಮೇಳನದಲ್ಲಿ ಸ್ವಯಂ ಸೇವಕಾರಾಗಿ ದುಡಿದ ಬ್ರಿಜಪಾಲಸಿಂಗರು ಪೋಲಿಸರ ಲಾಠಿ ಏಟುಗಳನ್ನು ಪಡೆದರು.

ಒಂದು ಸಾರಿ ಅವರು ವಿಠಲದಾಸ ಸೇಠರ ತೋಟದಿಂದ ಸ್ನಾನ ಮಾಡಿ ಹಿಂದಿರುತ್ತಿರುವಾಗ ಒಬ್ಬ ಬಂಡಿಯವನು ಕಾರಣವಿಲ್ಲದೆ ಕುಚೇಷ್ಟೆಯಿಂದ ಒಬ್ಬ ಹುಡುಗನನ್ನು ಕರೆದು ಬ್ರಿಜಿಪಾಲಸಿಂಗರಿಗೆ ಹೊಡೆಯಲು ಪ್ರಚೋದಿಸಿದನು. ಆಗ ಅಲ್ಲಿದ್ದ ಚಿದ್ರಿ ಮಠದ ಸ್ವಾಮಿಗಳು ಬಂಡಿಯವರಿಗೆ ಜಬರಿಸಿ ಕಳುಹಿಸಿದರು. ನಂತರ ಬಂಡಿಯವರೆಲ್ಲ ಒಗ್ಗೂಡಿ ಕಾರಣವಿಲ್ಲದೆ ಬ್ರಿಜಪಾಲಸಿಂಗರಿಗೆ ಹೊಡೆದರು. ಇದರ ಪ್ರತಿಕಾರವನ್ನು ತೋರಿಸುತ್ತೇನೆಂದು ಸಂಕಲ್ಪ ಮಾಡಿ ಅವರು ಮನೆಗೆ ಹೋದರು. ತಮ್ಮ ಸ್ನೇಹಿತನ ಜೊತೆಗೂಡಿ ಲಾಠಿ ಹಾಗೂ ರೈಫಲ್ಲುಗಳೊಂದಿಗೆ ಉಸ್ಮಾನ ಗಂಜಿಗೆ ಹೋಗಿ ಬಂಡಿಯವರನ್ನು. ಲಾಠಿಯಿಂದ ಹೊಡೆದರು. ಅವರೆಲ್ಲ ಬ್ರಿಜಪಾಲಸಿಂಗರಿಗೆ ಹೀಯಾಳಿಸುತ್ತಿದ್ದಾಗ ರೊಚ್ಚಿಗೆದ್ದು ಶಿಲಾರ ಎಂಬವನ ಮೇಲೆ ಗುಂಡು ಹಾರಿಸಿದರು. ಅವನ ನೆಲಕ್ಕೆ ಉರುಳಿದನು. ಬ್ರಿಜಪಾಲಸಿಂಗರು ಅಲ್ಲಿಂದ ಓಡಿದರು. ಇದಕ್ಕೆ ಪ್ರತಿಕಾರವೆನ್ನವಂತೆ ಇತ್ತೇಹಾದುಉಲ್ ಮುಸ್ಲಿಮನ್ ಸಂಸ್ಥೆಯ ಅಧ್ಯಕ್ಷನಾದ ಅಕ್ಬರ ಉಸ್ಮಾನ ಗಂಜ ಅಂಗಡಿ ಲೂಟಿ ಮಾಡಿದರು.

ಎಣ್ಣೆ ಎರಚಿ ಬೆಂಕಿ ಹಚ್ಚಿದರು. ಹೀಗೆ ಒಂದೇ ಘಂಟೆಗೆ ಉಸ್ಮಾನ ಗಂಜಿನಲ್ಲಿ ೧೧೪ ಅಂಗಡಿಗಳು ಭಸ್ಮವಾದವು. ಹೈದರಾಬಾದನಿಂದ ಪೋಲಿಸಪಡೆ ಬಂದಿತು. ಬೀದರನಲ್ಲಿ ಕರ್ಫ್ಯೂ ಜಾರಿಯಲ್ಲಿ ಬಂತು. ಅದೇ ದಿನ ಬಸವಂತರಾವ ಶೆಟಕಾರ ಅವರ ಕೊಲೆಯಾಯಿತು. ಉಸ್ಮಾನಗಂಜಿನ ಈ ಪ್ರಕರಣದ ನಂತರ ನಿಜಾಮನ ಸರ್ಕಾರ ಕೆಲ ಅಂಗಡಿಗಳನ್ನು ಕಟ್ಟಿಸಿಕೊಟ್ಟಿತು. ಅಪರಾಧಿಗಳಿಗೆ ಯಾವ ಶಿಕ್ಷೆಯೂ ಆಗಲಿಲ್ಲ. ಆದರೆ ಬ್ರಿಜಪಾಲಸಿಂಗರಿಗೆ ಮಾತ್ರ ಐದು ವರ್ಷಗಳ ಕಾಲ ಶಿಕ್ಷೆ ಅನುಭವಿಸಿದರು.

ಕಾರಾಗೃಹದ ನಂತರ ಬ್ರಿಜಪಾಲಸಿಂಗರು ಎರಡು ವರ್ಷಗಳ ಕಾಲ ಪಂಜಾಬದ ಆರ್ಯ ಸಮಾಜದ ಧರ್ಮ ಶಾಲೆಗಳಲ್ಲಿ ಉಳಿದರು. ಅಲ್ಲಿ ಅವರು ಸ್ವಾತಂತ್ರ್ಯ ಆರ್ಯ ರಾಷ್ಟ್ರ ನಿರ್ಮಾಣ ಎಂಬ ಸಂಸ್ಥೆಯಲ್ಲಿ ಮಿಲಿಟರಿ ತರಬೇತಿ ಪಡೆದರು. ಅವರ ಜೊತೆಗೆ ಗುರಪ್ಪ ಲಾಡಗೇರಿಯವರೂ ಇದ್ದರು. ಅಲ್ಲಿ ಅವರು ಹಿಂದಿ ರತ್ನ ಹಾಗೂ ಪ್ರಭಾಕರ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮುಂದೆ ೧೯೪೬ ರಲ್ಲಿ ಅವರು ಬೀದರಿಗೆ ಮರಳಿ ಬಂದರು. ಅಲ್ಲಿ ಅವರು ಆರ್ಯ ವೀರದಳ ಸಂಘವನ್ನು ಸ್ಥಾಪಿಸಿ, ಹೈದರಾಬಾದ ವಿಮೋಚನೆಗಾಗಿ ಭೂಗತರಾಗಿ ಕೆಲಸ ಮಾಡಲು ಪ್ರಾರಂಭಿಸಿದರು. ರಜಾಕಾರರ ಹಾವಳಿಯ ಕಾಲದಲ್ಲಿ ಅವರು ಸೋಲಾಪುರಕ್ಕೆ ನಿರಾಶ್ರಿತರಾಗಿ ಹೋದರು ಸೋಲಾಪೂರದಿಂದ ಹೈದರಾಬಾದ ವಿಮೋಚನೆಗಾಗಿ ಫೂಲಚಂದಗಾಂಧೀಯವರು ಬ್ರಿಜಪಾಲಸಿಂಗರಿಗೆ ಬೆಂಗಳೂರಿಗೆ ಕಳುಹಿಸಿದರು. ಅಲ್ಲಿ ಅವರಿಗೆ ಶಸ್ತ್ರಾಸ್ತ್ರಗಳ ತರಬೇತಿ ಕೊಡಲಾಯಿತು. ಆಗ ಅವರ ಜೊತೆಗೆ ಅಣದೂರಿನ ರಾಮಕೃಷ್ಣ, ಗುರಪ್ಪ ಲಾಡಗೇರಿ ಮಾಧವರಾವ ಪಾಠಕ ಹೀಗೆ ಮೂರು ಜನರಿದ್ದರು. ಅವರೆಲ್ಲ ಬೆಂಗಳೂರಿನಿಂದ ಹೈದರಾಬಾದಿಗೆ ಬಂದು ಅಲ್ಲಿ ಮಿಲ್ಟ್ರಿ ಕ್ಯಾಂಪಿನ ಮೇಲೆ ಉಸ್ಮನಿಯಾ ವಿಶ್ವವಿದ್ಯಾಲಯದ ಪ್ರಯೋಗ ಶಾಲೆಯ ಮೇಲೆ ನಿಜಾಮನ ಏಳು ಕಂಪೌಂಡು ಗೋಡೆಗಳ ಮೇಲೆ ಗುಂಡಿನ ಮಳೆ ಸುರಿಸಿದರು. ಆಗ ಕೆಲವರು ಪೋಲೀಸರ ಕೈ ವಶವಾದರು. ಆದರೆ ಮೋನಪ್ಪ ಮಾಸ್ತರರ ಸಹಕಾರದಿಂದ ಬ್ರಿಜಪಾಲಸಿಂಗರು ಬಂಧನಕ್ಕೊಳಗಾಗದೆ ಸೋಲಾಪೂರಕ್ಕೆ ಓಡಿ ಹೋದರು. ಅವರು ತಿರುಗಿ ಬೀದರಕ್ಕೆ ಬಂದದ್ದು ಪೋಲೀಸ ಕಾರ್ಯಾಚರಣೆಯ ನಂತರವೇ.

ಇಂದಿಗೂ ಕೂಡ ಬೀದರಿನಲ್ಲಿ ಅವರು ವೀರ ಸ್ವಾತಂತ್ರ್ಯ ಯೋಧರೆಂದು ಕೀರ್ತಿ ಹೊಂದಿದ್ದಾರೆ.

## ೫) ಭೀಮಣ್ಣ ಮಜ್ಜಿಗೆ

ಭೀಮಣ್ಣ ಮಜ್ಜಿಗೆ ಭೀಮಣ್ಣ ಮಜ್ಜಿಗೆಯವರಿಗೆ ಭಾಲ್ಕಿ ತಾಲ್ಲೂಕಿನ ಮರೂರ ಜನ್ಮಕೊಟ್ಟ ಸ್ಥಳವಾಗಿದೆ. ಅವರು ತಂದೆಯ ಹೆಸರು ಶಾಂತಪ್ಪ, ತಾಯಿಯ ಹೆಸರು ಗುಣವಂತವ್ವ, ಹನ್ನೆರಡು ವರ್ಷದವರಿದ್ದಾಗ ಅವರು ಖಾಸಗಿ ಶಾಲೆಯಲ್ಲಿ ಪ್ರವೇಶ ಪಡೆದರು. ಅವರ ಗುರುಗಳ ಹೆಸರು ಭಾಲ್ಕಿಯ ಚೆನ್ನವೀರಯ್ಯ ಸ್ವಾಮಿಗಳು. ಮುಂದೆ ರಂಜೇರಿಯ ಕುರುಬಗೇರಿ ಮಠದಲ್ಲಿ ಗುರುಮಿಟ್ಕಲದ ಶಾಂತವೀರ ಸ್ವಾಮಿಗಳು ಅವರ ಮುಂದಿನ ವಿದ್ಯಾಭ್ಯಾಸದ ವ್ಯವಸ್ಥೆ ಮಾಡಿದರು.

ಕಲ್ಲಪ್ಪ ಖೇಣಿಯವರು ಅವರನ್ನು ತಮ್ಮ ಮನೆಯಲ್ಲಿ ನಾಲ್ಕು ವರ್ಷ ಇಟ್ಟುಕೊಂಡು ಊಟ ವಸತಿಗಳನ್ನು ಒದಗಿಸಿದರಲ್ಲದೆ ಲಿಂಗನಗೌಡ ಎಂಬ ಶಿಕ್ಷಕರಿಂದ ಕನ್ನಡ ಭಾಷೆಯಲ್ಲಿ ಶಿಕ್ಷಣಕೊಡಿಸಿದರು. ಮುಂದೆ ಆಲಮಟ್ಟಿಯಲ್ಲಿ ಹರ್ಡೇಕರ ಮಂಜಪ್ಪನವರ ಆಶ್ರಮದಲ್ಲಿ ಎರಡು ವರ್ಷ ಅಭ್ಯಾಸ ಮಾಡಿದರು. ತಂದೆ ತೀರಿದ ವಾರ್ತೆ ಕೇಳಿ ಅವರು ತಿರುಗಿ ಬೀದರಕ್ಕೆ ಬಂದು ಅಲ್ಲಿ ಏಳನೇ ತರಗತಿಯವರೆಗೆ ಅಭ್ಯಾಸ ಮಾಡಿದರು. ಮುಂದೆ ಮರೂರ ಗ್ರಾಮದಲ್ಲಿ ಉಳಿದು ಒಕ್ಕಲುತನ ವೃತಿಯನ್ನು ಕೈಗೊಂಡರು.

ಭೀಮಣ್ಣ ಮಜ್ಜಿಗೆಯವರು ಹೈದರಾಬಾದ ಮುಕ್ತಿ ಆಂದೋಲನದಲ್ಲಿ ಸೇವೆ ಸಲ್ಲಿಸಿದರು. ರಂಗನಾಥರಾವ ಸಾಯಗಾಂವಕರ, ನಾಗನಾಥರಾವ ವಕೀಲ, ರಾಮಚಂದ್ರ ಎಂ.ಪಿ.ಮುಂತಾದ ಹೋರಾಟಗಾರರಿಗೆ ಅವರು ಇದ್ದಲ್ಲಿಗೆ ಹೋಗಿ ಧನ ಹಾಗೂ ಆಹಾರ ಒಯ್ದು ಕೊಡುತ್ತಿದ್ದರು. "ಹೈದರಾಬಾದಿನಲ್ಲಿ ನಡೆದ ಗುಪ್ತ ಸಭೆಯೊಂದರಲ್ಲಿ ಭಾಗವಹಿಸಿದಾಗ ಲಕ್ಷ್ಮಣರಾವ ಕರ್ಚಿಲಕರರು ನಿಜಾಮನ ಮೇಲೆ ಬಾಂಬು ಹಾಕಬೇಕೆಂಬ ಸೂಚನೆ ಬಂದಿತು."[೬] ಆ ಪ್ರಯತ್ನದಲ್ಲಿ ಕರ್ಚಿಲಕರರು ವಿಫಲರಾದರು. ಅವರು ಹುಚ್ಚರಾಗಿದ್ದಾರೆಂದು ವೈದ್ಯರ (ಪ್ರಮಾಣ ಪತ್ರ) ಒದಗಿಸಿ ಅವರನ್ನು ಬಿಡುಗಡೆ ಮಾಡಲಾಯಿತು. ಮುಂದೆ ಕರ್ಚಿಲಕರರು ಎರಡನೇ ಸಾರಿ ಕೂಡ ನಿಜಾಮನ ಮೇಲೆ ಬಾಂಬ ಎಸೆಯುವರಲ್ಲಿ ವಿಫಲರಾಗಿ ಸೋಲಾಪುರಕ್ಕೆ ಓಡಿ ಹೋದರು.

ಲಕ್ಷ್ಮಣರಾವ ಕರ್ಚಿಲಕರರು ಮೈದರ್ಗಿ ಗ್ರಾಮದಲ್ಲಿ ಶಿಬಿರ ನಡೆಸುತ್ತಿದ್ದರು. ಆ ಶಿಬಿರದಲ್ಲಿ ಮಜ್ಜಿಗೆಯವರು ಹಾಗೂ ರಾಮಚಂದ್ರ ಬೋಡಕೆಯವರು ಶಸ್ತ್ರಾಸ್ತ್ರಗಳ ತರಬೇತಿ ಪಡೆದರು. ಪಠಾಣ ಸಿಪಾಯಿಗಳೊಡನೆ ಹಲವು ಸಾರೆ ಗುಂಡಿನ ಚಕಮಕಿಗಳು ನಡೆದು ಮಜ್ಜಿಗೆಯವರು ಜೀವ ಅಪಾಯಸ್ಥಿತಿಯಲ್ಲಿತ್ತು. ಒಂದು ಸಾರೆ ಅವರು ಜಗ್ಗುವ ಕಬ್ಬಿಣದ ಮೊಟ್ಟಿಯೊಳಗೆ ಅಡಗಿ ಕುಳಿತು ಪಠಾಣರಿಂದ ಉಳಿಸಿಕೊಂಡರು.

ಪೋಲಿಸ ಕಾರ್ಯಾಚರಣೆಯ ನಂತರ ಅವರು ಆರ್.ವಿ.ಬೀಡಪ, ಅಬ್ಬದುಲನಬಿ ವಕೀಲ ಮೊದಲಾದವರೊಂದಿಗೆ ಸೇರಿ ಬೀದರ ಜಿಲ್ಲೆಯಲ್ಲಿ ಕನ್ನಡ ಪ್ರದೇಶಗಳು ಮೈಸೂರ ರಾಜ್ಯಕ್ಕೆ ಸೇರಬೇಕೆಂದು ರಾಜ್ಯ ಪುನರ್ವಿಂಗಡಣಾ ಆಯೋಗದ ಎದುರಿಗೆ ಅಹವಾಲು ಕೊಟ್ಟರು. ಅದರಂತೆ ಮುಂದೆ ಶಿವಕುಮಾರ ಸ್ವಾಮಿಗಳ ಸಿದ್ದಾರೂಢ ಮಠ ಸ್ಥಾಪನೆಯಲ್ಲಿ ಅವರು ಸಲ್ಲಿಸಿದರು.

**೬) ಮಹಾಂತಪ್ಪ ಮಡಕಿ:**

ಮಹಾಂತಪ್ಪ ಮಡಕಿಯವರು ಬೀದರನ ಮಂಗಲಪೇಟೆಯವರು. ಅವರ ತಂದೆಯ ಹೆಸರು ನಾಗಪ್ಪ ತಾಯಿಯ ಹೆಸರು ಗುಂಡಮ್ಮ ಬೀದರಿನಲ್ಲಿ ಮ್ಯಾಟ್ರಿಕ್ ಪರೀಕ್ಷೆ ಮುಗಿಸಿದ ಅವರು ಹೈದರಾಬಾದಿನ ನಿಜಾಮ ಕಾಲೇಜಿನಲ್ಲಿ ಇಂಟರ್ ಮಿಡಿಯೆಟ್‌ವರೆಗೆ ಅಭ್ಯಸ ಮಾಡಿದರು. ಬಟ್ಟೆ ಅಂಗಡಿ ಮಾಲಿಕರಾಗಿದ್ದಂತೆ, ಕೇವಲ ಎರಡು ವರ್ಷಗಳ ಕಾಲ ಅರಣ್ಯಾಧಿಕಾರಿಗಳಾಗಿಯೂ ಕೆಲಸ ಮಾಡಿದ್ದಾರೆ.

ಅವರು ಮುರಳಿಧರರಾವ ಕಾಮತೀಕರರೊಂದಿಗೆ ೧೯೪೨ರ "ಚಲೇ ಜಾವ್" ಚಳುವಳಿಯಲ್ಲಿ ಸಕ್ರಿಯಲ್ಲಿ ಸಕ್ರಿಯವಾಗಿ ನಿಜಾಮ ಸರ್ಕಾರದ ಅವಕೃಪೆಗೆ ಒಳಗಾದರು. ಅದರಂತೆ ೧೯೪೭ ರಲ್ಲಿ ಬೀದರ ಜಿಲ್ಲೆಯ ಸುಮಾರು ೨೪ ಜನರಿಗೆ ಬೀದರ ಔರಂಗಾಬಾದ ಗುಲಬರ್ಗಾ ಸೆರೆಮನೆಯಲ್ಲಿಟ್ಟರು. ಮಡಕಿಯವರು ಔರಂಗಾಬಾದ ಕಾರಾಗೃಹದಲ್ಲಿ ಕಠಿಣ ಶಿಕ್ಷೆ ಅನುಭವಿಸಿದರು. ಹೈದರಾಬಾದ ವಿಮೋಚನೆಯ ನಂತರ ಇವರೆಲ್ಲರನ್ನು ಬಂಧಮುಕ್ತಗೊಳಿಸಲಾಯಿತು.

ಕಾಂಗ್ರೆಸ್ಸಿನ ನಿಷ್ಠಾವಂತ ಕಾರ್ಯಕರ್ತರಾದ ಮಹಾಂತಪ್ಪ ಮಡಕಿಯವರು ಮೂರು ಸಾರೆ ಬೀದರ ನಗರ ಸಭೆಯ ಅಧ್ಯಕ್ಷರಾಗಿ ಕಾರ್ಯ ಮಾಡಿದರು. ಅವರು ಅಧ್ಯಕ್ಷರಾದಾಗ ಬೀದರ ನಗರ ಬಹು ವಿಸ್ತಾರವಾಗಿ ಬೆಳೆಯಿತು. ಅವರ ಅಧಿಕಾರಾವಧಿಯಲ್ಲಿ ಸಾವಿರಾರು ನಿವೇಶನಗಳನ್ನು ಮಾರಲಾಯಿತು. ಮನಸ್ಸು ಮಾಡಿದ್ದರೆ ಅವರು ನೂರಾರು ನಿವೇಶನಗಳನ್ನು ಸ್ವಂತಕ್ಕಾಗಿ ಸಂಪಾದಿಸಬಹುದಿತ್ತು. ಆದರೆ ಅವರು ತಮ್ಮ ಮನೆಯ ಹೊರತಾಗಿ ಬೇರೆ ಕಡೆ ನಿವೇಶನ ಪಡೆಯಲು ಹವಣಿಸಲಿಲ್ಲ. ಇದು ಅವರ ಪ್ರಾಮಾಣಿಕತೆಗೆ ಜ್ವಲಂತ ನಿದರ್ಶನವಾಗಿದೆ.

ಜನತಾ ಬಾಜಾರಿನ ಅಧ್ಯಕ್ಷರಾಗಿದ್ದ ಅವರು ಗಾಂಧೀಗಂಜ ಪ್ರಾಥಮಿಕ ಸಹಕಾರ ಬ್ಯಾಂಕಿನ ಸಂಸ್ಥಾಪಕ ಅಧ್ಯಕ್ಷರಾಗಿ ಆ ಬ್ಯಾಂಕಿಗೆ ಸರಿಯಾದ ತಳಹದಿ ಹಾಕಿಕೊಟ್ಟರು. ಅದರಂತೆ ಗಾಂಧೀಜೀ ಮಾರ್ಕೆಟಿಂಗ್ ಕಮೀಟಿಯ ಚೇರಮನರಾಗಿಯೂ ಸೇವೆ ಸಲ್ಲಿಸಿದ್ದಾರೆ. ವ್ಯಾಪಾರಿಗಳಾಗಿ ಪರಿಶುದ್ಧ ಕಾರ್ಯ ಮಾಡಿ ಕೀರ್ತಿಗಳಿಸಿದ್ದಾರೆ.

ವೀರಶೆಟ್ಟಿ ಕುಸನೂರ, ಮಾಣಿಕರಾವ ಘುಲೇಕರ, ಮುರಲೀಧರರಾವ ಕಾಮತಿಕರರು ಇವರ ಪರಮ ಸ್ನೇಹಿತರಾಗಿದ್ದರು. ಮಾಜಿ ಮಂತ್ರಿ ಮಕಸೂದ ಅಲಿಖಾನ ಮಾಜಿ ಶಾಸಕ ಲೈಖೋದ್ದೀನ ವಕೀಲರೂ ಕೂಡ ಇವರ ಅಚ್ಚುಮೆಚ್ಚಿನ ಸ್ನೇಹಿತರಾಗಿದ್ದರು. ಇವರು ಜಾತ್ಯತೀತರಾಗಿದ್ದರು.

ಮಡಕಿಯವರು ಸ್ವಾತಂತ್ರ್ಯ ಸೇನಾನಿಗಳಿಗೆ ಕೊಡುವ ನೀವೃತ್ತಿ ವೇತನ ಸ್ವೀಕರಿಸಲಿಲ್ಲ. ಆದರೆ ರೋಗಪೀಡಿತರಾದಾಗ ಪರಿವಾರದವರ ಹಾಗೂ ಸ್ನೇಹಿತರ ಒತ್ತಾಯಕ್ಕೊಳಗಾಗಿ ನೀವೃತ್ತಿ ವೇತನ ಸ್ವೀಕರಿಸಬೇಕಾಯಿತು. ಇಂದಿನ ಭ್ರಷ್ಟ ವಾತಾವರಣದಲ್ಲಿ ಅವರೊಬ್ಬ ನಿಷ್ಕಲಂಕ, ನಿಷ್ಕಲ್ಮಶ ವ್ಯಕ್ತಿಯಾಗಿದ್ದರು. ಇವರು ೮೦ ವರ್ಷ ನಿಸ್ವಾರ್ಥ ಹಾಗೂ ಪವಿತ್ರ ಜೀವನ ಸಾಗಿಸಿ ದಿನಾಂಕ ೦೫-೧೦-೧೯೯೨ ರಂದು ಲಿಂಗೈಕರಾದರು.

## ೭) ಮಾಣಿಕರಾವ ಘುಲೇಕರ

ಬೀದರ ಜಿಲ್ಲೆಯಲ್ಲಿ ಮಾಣಿಕರಾವ ಘುಲೇಕರರನ್ನು ಅರಿಯದವರಾರು? ಅವರಿಂದು ಬೀದರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಂತೆ ಬೀದರ ಜಿಲ್ಲಾ ಸ್ವಾತಂತ್ರ್ಯ ಯೋಧರ ಸಂಘಟನೆಯ ಅಧ್ಯಕ್ಷರಾಗಿದ್ದಾರೆ. ಅವರು ಸರಳತೆಯ ಸಾಕಾರ ಮೂರ್ತಿ. ರಾಜಕೀಯದಲ್ಲಿ ಇದ್ದುಕೊಂಡು ಶುದ್ಧ ಹಸ್ತರಾದ ಅವರು ಹಿಂದುಳಿದ ಜನಾಂಗಗಳ ಮುಖಂಡರೂ ಆಗಿದ್ದಾರೆ. ಸದಾ ಧಾರ್ಮಿಕ, ಅಧ್ಯಾತ್ಮಿಕ ಗ್ರಂಥ ವಾಚನ ಹಾಗೂ ಅಧ್ಯಯನಗಳಲ್ಲಿ ತೊಡಗಿರುವ ಅವರು ನಿರ್ಮಲ ಮನಸ್ಸಿನವರೂ ಆಗಿದ್ದಾರೆ. ಸ್ವಾತಂತ್ರ್ಯ ಸೇನಾನಿಗಳ ಉತ್ಕಟ ಹಿತಚಿಂತಕರೂ ಆಗಿದ್ದಾರೆ.

೧೯೪೭-೪೮ ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಹಾಗೂ ಹೈದರಾಬಾದ ರಾಜ್ಯ ವಿದ್ಯಾರ್ಥಿಗಳ ಒಕ್ಕೂಟಗಳ ಕರೆಗೆ ಓಗೊಟ್ಟು ಹೈದರಾಬಾದಿನಲ್ಲಿ ಒದುತ್ತಿರುವ ಬಹುತೇಕ ಎಲ್ಲ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣವನ್ನು ತೊರೆದರು. ಆಗ ಮಾಣಿಕರಾವ ಘುಲೆಕರರು ಹೈದರಾಬಾದಿನ ಸಿಟಿ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದರು. ಅವರೂ ಕೂಡ ದೇಶದ ಕರೆಗೆ ಓಗೊಟ್ಟು ಕಾಲೇಜು ಶಿಕ್ಷಣಕ್ಕೆ ತಿಲಾಂಜಲಿಯಿತ್ತು ತಮ್ಮ ಜನ್ಮ ಸ್ಥಳವಾದ ಬೀದರಿಗೆ ವಾಪಸು ಬಂದರು. ಆಗ ಬೀದರಿನಲ್ಲಿ ರಂಗನಾಥರಾವ ಸಾಯಗಾವಕರ ಹಾಗೂ ಅಣ್ಣಾರಾವ ಖೇಡ್ಕರರು ಜಿಲ್ಲಾ ಕಾಂಗ್ರೆಸ್ ಕಮಿಟಿಯ ಧುರೀಣತ್ವವಹಿಸಿದ್ದರು. ಅವರ ನಿರ್ದೇಶನದ ಪ್ರಕಾರ ತರುಣ ಘುಲೇಕರರು "ಗೆರಿಲ್ಲಾ ಯುದ್ಧದ ತರಬೇತಿಗಾಗಿ ವಿಜಯವಾಡಕ್ಕೆಹೋದರು."[೯] ಅಲ್ಲಿ ಅವರು ರಜಾಕಾರರ ವಿರುದ್ಧ ಹೋರಾಡಲು ಮುದ್ದುಗುಂಡುಗಳನ್ನು ಹೇಗೆ ಬಳಸಬೇಕೆಂಬುದನ್ನು ಕಲಿತರು.

ಆಗ ಹೈದರಾಬಾದ ಸಂಸ್ಥಾನದ ಕಾಂಗ್ರೆಸ್ ಮುಖಂಡರಾಗಿದ್ದ ಸ್ವಾಮಿ ರಾಮಾನಂದ ತೀರ್ಥ, ಬಾಬಾಸಾಹೇಬ, ಗೋವಿಂದಭಾಯಿ ಶ್ರಾಫ್, ಡಾ॥ ಮೇಲ್ಕೋಟೆ, ದಿಗಂಬರಾವ ಬಿಂದು, ಜನಾರ್ಧರಾವ ದೇಸಾಯಿ, ಮಲ್ಲಪ್ಪ ಕೊಳ್ಳೂರ ಅವರ ಮಾರ್ಗದರ್ಶನದಲ್ಲಿ ಘುಲೇಕರರು ಸಕ್ರಿಯವಾಗಿ ಸ್ವಾತಂತ್ರ್ಯ ಆಂದೋಲನದಲ್ಲಿ ಧುಮುಕಿದರು. ಅವರು ವಿಜಯವಾಡಾದಲ್ಲಿ ನಡೆದ ಗೆರಿಲ್ಲಾ ಯುದ್ಧ ತರಬೇತಿ ಮುಗಿಸಿಕೊಂಡು ಬೀದರಿಗೆ ಬಂದು ಎಲ್ಲಿ ಭೂಗತ ಚಳುವಳಿಕಾರರಾಗಿ ತಮ್ಮ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದರು.

ಜಿಲ್ಲಾ ಕಾಂಗ್ರೆಸ್ ಕಮಿಟಿಯ ನಿರ್ದೇಶನದ ಪ್ರಕಾರ ಮಾಣಿಕರಾವ ಘುಲೆಕರರು ಹಾಗೂ ಗುರಪ್ಪ ಲಾಲವಾಡಿಯವರು ರೈಲು ಹಳಿಗಳಿನ್ನು ಕಿತ್ತುವದು. ಟೆಲಿಫೋನ್ ತಂತಿಗಳನ್ನು ಕತ್ತರಿಸುವುದು ಮುಂತಾದ ಚಟುವಟಿಕೆಗಳಲ್ಲಿ ತೊಡಗಿದರು. ಇವರ ಈ ಕೃತ್ಯಗಳನ್ನು ನಿರೀಕ್ಷಿಸುತ್ತಿದ್ದ ಪೊಲೀಸರ ಕಣ್ಣುತಪ್ಪಿಸಿ ಘುಲೇಕರರು ಗುರಪ್ಪ ಲಾಲವಾಡಿಯವರೊಂದಿಗೆ ಸೋಲಾಪೂರಕ್ಕೆ ತೆರಳಿದರು. ಆಗ ರಂಗನಾಥರಾವ ಸಾಯಗಾಂವಕರ ಹಾಗೂ ಅಪ್ಪಾರಾವ ಅಡ್ವೋಕೆಟರು ಸೊಲಾಪುರ ಕ್ಯಾಂಪಿನ ಧುರೀಣತ್ವ ವಹಿಸಿದ್ದರು. ಅವರ ನಿರ್ದೇಶನದಲ್ಲಿ ಅಕ್ಕಲಕೋಟ, ದುಧನಿ, ಬಾರ್ಸಿ ಮತ್ತು ಯಾದಗಿರಿ ಕ್ಯಾಂಪುಗಳಲ್ಲಿ ಘುಲೇಕರರು ಸಕ್ರಿಯ ಪಾತ್ರ ವಹಿಸಿದರು.

ಯಶವಂತರಾವ ಸಾಯಗಾವಕರ, ಮಾಣಿಕರಾವ ಮುಳೆ, ಅಪ್ಪಾರಾವ ಕಾಳಖೇಡ ಮುಂತಾದವರ ನೇತೃತ್ವದ ಕಿಸಾನ ಟೋಳಿ ಸೋಲಾಪುರಕ್ಕೆ ಬಂದಿತು. ಮತ್ತು ಸ್ವಾತಂತ್ರ್ಯಯೋಧರ ಆಫೀಸಿನೊಂದಿಗೆ ಸಂಪರ್ಕ ಬೆಳೆಸಿತು. ಬೀದರ ಜಿಲ್ಲೆಯಲ್ಲಿ ರಜಾಕಾರರ ಉಪಟಳವನ್ನು ತಡೆಯಲು ಅವರಿಗೆ ಸೋಲಾಪುರ ಕ್ಯಾಂಪ್ ಆಫಿಸು ಮದ್ದುಗುಂಡುಗಳನ್ನು ಒದಗಿಸಿತು. ಮತ್ತು ಅವರೊಂದಿಗೆ ಘುಲೇಕರರನ್ನೂ ಬೀದರಿಗೆ ಕಳಿಸಿತು. ಅವರೆಲ್ಲ ಸೋಲಾಪುರದಿಂದ ಕಾಲ್ನಡಿಗೆಯ ಮೂಲಕ ಬೀದರ ಜಿಲ್ಲೆಯನ್ನು ತಲುಪಿದರು. ಮಾರ್ಗದಲ್ಲಿ ಹಂದ್ರಾಳ, ಅಟ್ಟರ್ಗಾ, ಮೆಹಕರ ಶಹಜಾನಿ ಔರಾದ, ತೊಂಡ ಚೇರಗಳಲ್ಲಿ ರಜಾಕಾರರ ಹಾಗೂ ನಿಜಾಮ ಪೊಲೀಸರ ವಿರುದ್ಧ ಹೋರಾಡುತ್ತ ಮುಂದುವರೆದರು. ಕೆಲವು ದಿನಗಳ ನಂತರ ಸರ್ಕಾರವು ಯಶವಂತರಾವ ಸಾಯಗಾವಕರ ಹಾಗೂ ಇತರರ ಮೇಲೆ ವಾರಂಟ ಹೊರಡಿಸಿತು. ಆದರೆ ಇವರೆಲ್ಲ ರಜಾಕಾರರ ವಿರುದ್ಧ ಹೋರಾಟ ಮಾಡುತ್ತಲೇ ಇದ್ದರು.

ಮಾಣಿಕರಾವ ಘುಲೇಕರರು ಬೀದರ ಜಿಲ್ಲೆಯಿಂದ ವಿಧಾನ ಪರಿಷತ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೮) ಮುರಳಿಧರರಾವ ಕಾಮತೀಕರ:

ಹೈದರಾಬಾದ ಮುಕ್ತಿ ಆಂದೋಲನದ ಮಾರ್ಗದರ್ಶಕರಾಗಿದ್ದ ಸ್ವಾತಂತ್ರ್ಯ ಹೋರಾಟದ ಧೀರ ಸೇನಾನಿ ಮುರಳೀಧರರಾವ ಕಾಮತೀಕರರು ಕಿಶನರಾವ ಕಾಮತೀಕರರ ಮಗನಾಗಿ ೧೯೧೬ ರಲ್ಲಿ ಜನಿಸಿದರು. ಆರಂಭದ ದಿನಗಳನ್ನು ಉದ್ಗೀರಿನಲ್ಲಿ ಕಳೆದರು. ನಂತರ ಬೀದರಿಗೆ ಬಂದು ನೆಲಸಿದರು.

೧೯೩೪-೩೫ ರಲ್ಲಿ ಅವರು ಹೈದರಾಬಾದಿನಲ್ಲಿ ಕಾನೂನು ಅಭ್ಯಾಸ ಮಾಡುತ್ತಿದ್ದಾಗಲೇ ಕಾಂಗ್ರೆಸ್ ಆರಂಭಿಸಿದ ರಾಷ್ಟ್ರೀಯ ಜನ ಜಾಗೃತಿ ಕಾರ್ಯಗಳಲ್ಲಿ ಪಾಲ್ಗೊಂಡರು. ೧೯೩೮ರ ಕ್ವಿಟ್ ಇಂಡಿಯಾ ಚಳುವಳಿ ಇವುಗಳಲ್ಲಿ ಸಕ್ರಿಯಾವಾಗಿ ಭಾಗವಹಿಸಿದ್ದಕ್ಕಾಗಿ ಜೈಲು ಸೇರಿದರು.

ಬೀದರ ಜೈಲಿನ ಪುಟ್ಟ ಕೋಣೆಯೊಂದರಲ್ಲಿ ಕಮ್ಯುನಿಷ್ಟ ಧುರೀಣ ಎನ್.ಜಿ.ಗೋರೆಯವರೊಂದಿಗೆ ಜೈಲು ವಾಸ ಅನುಭವಿಸುತ್ತಿದ್ದಂತೆಯೇ ಸಮಾಜವಾದ ಹಾಗೂ ಸೌಮ್ಯವಾದ ಕುರಿತು ಅಧ್ಯಯನ ನಡೆಸಿದರು. ಜೈಲಿನಲ್ಲಿ ಒಳ್ಳೆಯ ಆಹಾರ ಸಿಗದೆ ಅನಾರೋಗ್ಯದಿಂದ ಬಳಲಿದರು. ಜೈಲಿನ ಅಧಿಕಾರಿಗಳೊಂದಿಗೆ ಸಂಯಮದಿಂದ ನಡೆದುಕೊಂಡು ತಾವು ಅಪ್ಪಟ ಗಾಂಧೀವಾದಿಗಳೆಂದು ಸಾಬೀತು ಪಡಿಸಿದರು. ಈ ಅವಧಿಯಲ್ಲಿ ಅವರು ಒಂಬತ್ತು ತಿಂಗಳು ಜೈಲು ವಾಸ ಅನುಭವಿಸಿದರು.

ಹೈದರಾಬಾದ ಪ್ರಾಂತೀಯ ಕಾಂಗ್ರೆಸ್ ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ಪ್ರಚೋದನಾಕಾರಿ ಭಾಷಣ ಮಾಡಿದರೆಂಬ ಆರೋಪಕ್ಕೆ ಗುರಿಯಾಗಿ ಒಂದು ವರ್ಷಹದಿನೈದು ದಿನಗಳ ವಿಚಾರಾಧೀನ ಕೈದಿಯಾಗಿ ಕಾಲ ಕಳೆದರಲ್ಲದೆ ಮುಂದೆ ವಿಚಾರಣೆಯ ನಂತರ ಹೈದರಾಬಾದ ಕೇಂದ್ರ ಕಾರಾಗೃಹಕ್ಕೆ ವರ್ಗಾಯಿಸಲ್ಪಟ್ಟರು.

"೧೯೩೯-೪೦ ರಲ್ಲಿ ವಂದೇ ಮಾತರಂ ಚಳುವಳಿಯಲ್ಲಿ ಪಾಲುಗೊಂಡರಲ್ಲದೆ ಮನ್ಮಾಡದಲ್ಲಿ ನಡೆದ ಕಾಂಗ್ರೆಸ್‌ನ ಅಧಿವೇಶನದಲಿ ಬೀದರ ಜಿಲ್ಲಾ ಪ್ರತಿನಿಧಿಯಾಗಿ ಭಾಗವಹಿಸದರು."[೧೦]

೧೯೪೬ರಲ್ಲಿ ಕೋಹಿನೂರದಲ್ಲಿ ಲೇವಿ ವಸೂಲಿಗೆ ಸಂಬಂಧಿಸಿದಂತೆ ನಡೆದ ಸರಕಾರಿ ವಿರೋಧಿ ಆಂದೋಲನದಲ್ಲಿ ಭಾಗವಹಿಸಿದ್ದರು. ಅದೇ ವರ್ಷ ಆಂಧ್ರದ ರಾಯಕೋಡದಲ್ಲಿ ಕಾಂಗ್ರೆಸ್ ಅಧಿವೇಶನ ನಡೆದಾಗ ಅಲ್ಲಿ ಸುಮಾರು ಮೂರು ಲಕ್ಷದಷ್ಟು ಜನ ಸೇರಿದ್ದು ಸರಕಾರದ ವಿರುದ್ಧ ಘೋಷಣೆಗಳು ಮುಗಿಲು ಮುಟ್ಟಿದವು. ಈ ಸಂದರ್ಭದಲ್ಲಿ ಕಾಮತೀಕರರು ರಾಮಾನಂದ ತೀರ್ಥರಿಗೆ ತಮ್ಮ ನೆರವನ್ನು ಕೊಟ್ಟರು.

ಮುಂದೆ ಭೂಗತರಾಗಿ ಗಡಿ ನಾಡಿನ ಪ್ರದೇಶಗಳಲ್ಲಿ ಗೊಂಡಾರಣ್ಯಗಳಲ್ಲಿ ತುಂಬ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಿದರು. ಆಗ ಕೂಡ ಒಮ್ಮೆ ಅವರು ಸರಕಾರದ ಬಂಧನಕ್ಕೊಳಗಾಗಿ ಸಿಕಿಂದರಾಬಾದ ಜೈಲು ಸೇರಬೇಕಾಯಿತು.

ಪೋಲಿಸ ಕಾರ್ಯಾಚರಣೆಯ ನಂತರ ೧೧ನೇ ಅಕ್ಟೋಬರ ೧೯೪೮ರಂದು ಬಿಡುಗಡೆಯಾದರು. ಹೀಗೆ ಒಟ್ಟು ಅವರು ಮೂರು ವರ್ಷಗಳ ಕಾಲ ಕಾರಾಗೃಹವಾಸ ಅನುಭವಿಸಿದರು. ಜೈಲಿನಿಂದ ಹೊರ ಬರುತ್ತಲೇ ಅವರು ಸ್ಟೇಟ ಕಾಂಗ್ರೆಸ್ ಕಮಿಟಿಯ ಸೆಕ್ರೇಟರಿಯಾಗಿ ಆರಿಸಲ್ಪಟ್ಟರು.

ಭಾಲ್ಕಿ ಹಾಗೂ ಹುಮನಾಬಾದ ಕ್ಷೇತ್ರಗಳಿಂದ ಶಾಸಕರಾಗಿ ದುಡಿದ ಮುರಲಿಧರರಾವ ಕಾಮತೀಕರರು ೧೯೭೨ರಲ್ಲಿ "ಇಂದಿರಾ ಗಾಂಧೀಯವರಿಂದ ಸನ್ಮಾನ ಗೊಂಡಿದ್ದಾರಲ್ಲದೆ ೧೯೯೨ರಲ್ಲಿ ರಾಜ್ಯ ಪ್ರಶಸ್ತಿ ಯನ್ನು ಪಡೆದಿದ್ದಾರೆ."[೧೧] ಅವರು ರಾಜ್ಯ ಸರಕಾರದ ಹಾಗೂ ಕೇಂದ್ರ ಸರಕಾರದ ಮಾಸಾಶನ ಪಡೆಯುತ್ತಿದ್ದರು. ಅವರ ನಿಧನದ ತರುವಾಯ ಅವರ ಧರ್ಮಪತ್ನಿ ಮಾಸಾಶನ ಪಡೆಯುತ್ತಿದ್ದಾರೆ. "ಬೀದರಿನ ಪ್ರತಿ ನಿಧಿಯಾಗಿ ಮುಕ್ತಿ ಸಂಗ್ರಾಮದಲ್ಲಿ ಪಾಲ್ಗೊಂಡ ಮುರಳೀಧರರಾವ ಕಾಮತೀಕರರು ನಡೆಸಿದ ಹೋರಾಟ ಅತ್ಯಂತ ಮಹತ್ವ ಪೂರ್ಣವಾದದ್ದು. ಯುವಕರಾದ ಇವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹಳ ಶ್ರದ್ಧೆ ಹಾಗೂ ಅಭಿಮಾನದಿಂದ ಕ್ರಿಯಾಶೀಲರಾಗಿ ದುಡಿದು. ಅಪಾರವಾದ ತೊಂದರೆಗಳನ್ನು ಅನುಭವಿಸಿದರು. ಎಲ್ಲ ಕಠಿಣ ಪ್ರಸಂಗಗಳಲ್ಲೂ ತುಂಬಾ ಧೈರ್ಯದಿಂದ ಹೋರಾಡಿ ಇವರು ಸಾರ್ವಜನಿಕರ ದೃಷ್ಟಿಯಲ್ಲಿ ಓರ್ವ ಆದರ್ಶ ಕಾರ್ಯಕರ್ತರಾಗಿದ್ದರು." ಎಂದು ಸ್ವಾಮಿ ರಾಮಾನಂದ ತೀರ್ಥರು ತಮ್ಮ "ಮುಕ್ತಿ ಸಂಗ್ರಾಮದ" ಕೃತಿಯಲ್ಲಿ ಮುರಳೀಧರರಾವ ಕಾಮತೀಕರ ಕುರಿತು ಬರೆದಿದ್ದಾರೆ.

### ೯) ರಂಗನಾಥರಾವ ಸಾಯಗಾಂವಕರ:

ರಂಗನಾಥರಾವ ಸಾಯಗಾಂವಕರರು ಭಾಲ್ಕಿ ತಾಲೂಕಿನ ಸಾಯಗಾಂವ ಗ್ರಾಮದವರು. ಅವರ ತಂದೆ ಕಿಶನರಾವ ಕುಲಕರ್ಣಿ, ಅವರು ಜನಿಸಿದ್ದು ೧೯೧೦ರಲ್ಲಿ, ಮಾಣಿಕನಗರ, ತುಳಜಾಪೂರ ಸಮೀಪದ ಹಿಪ್ಪರ್ಗಾ, ಅಂಬೆಜೋಗಾಯಿ, ಗುಲಬರ್ಗಾ ಮೊದಲಾದ ಕಡೆ ಅಭ್ಯಾಸ ಮಾಡಿದ ಇವರು ಮದನ ಮೋಹನ ಮಾಲವೀಯರ ಕೃಪೆಯಿಂದ ಬನಾರಸ ಹಿಂದೂ ವಿಶ್ವವಿದ್ಯಾಲಯದಿಂದ ೧೯೪೦ ರಲ್ಲಿ ಪದವಿ ಪಾಸಾದರು. ರಾಮಾನಂದ ಸ್ವಾಮೀಜಿಯವರೊಂದಿಗೆ ಮುಂಬಾಯಿಗೆ ಹೊರಟಾಗ ಪುಣೆಯಲ್ಲಿ ಎಂ.ಎನ್. ರಾಯರ ಭಾಷಣದಿಂದ ಪ್ರಭಾವಿತರಾಗಿ ಮುಂದಿನ ಪಯಣವನ್ನೆ ಮೊಟಕುಗೊಳಿಸಿ ಎಂ.ಎನ್. ರಾಯರ ಸೌಮ್ಯವಾದಕ್ಕೆ ಮಾರು ಹೋದರು.

ಹೈದರಾಬಾದಿನಲ್ಲಿ ಆಗ ಕ್ವಿಟ್ ಇಂಡಿಯಾ ಚಳುವಳಿಯ ಸಿದ್ಧತೆಗಳು ನಡೆದಿದ್ದವು. ರಾಮಾನಂದ ತೀರ್ಥರ ಆದೇಶದಂತೆ ಸಾಯಗಾಂವಕರರು ಕರ್ನಾಟಕ ಪರಿಷತ್ತಿನ ಜವಾಬ್ದಾರಿ ವಹಿಸಿದ್ದರು. ಮುಂದೆ ೮-೯-೧೯೪೨ ರಂದು ಅಖಿಲ ಭಾರತೀಯ ಕಾಂಗ್ರೆಸ್ ಅಧಿವೇಶನ ಮುಂಬೈಯಲ್ಲಿ ನಡೆದಾಗ ಅದರಲ್ಲಿ ಭಾಗವಹಿಸಲು ರಾಮಾನಂದ ತೀರ್ಥರೊಡನೆ ಸಾಯಗಾಂವಕರರು ಮುಂಬೈಯಲ್ಲಿ ನಡೆದಾಗ ಅದರಲ್ಲಿ ಭಾಗವಹಿಸಿಲು ರಾಮಾನಂದ ತೀರ್ಥರೊಡನೆ ಸಾಯಗಾಂವಕರರು ಮುಂಬಯಿಗೆ ಹೋದರು. ಅಲ್ಲಿ ತಮ್ಮೆಲರ ಬಂಧನದ ಸುಳಿವು ಸಿಕ್ಕಿ ಸಾಯಗಾಂವಕರರು ರಾಮಾನಂದ ತೀರ್ಥರೊಡನೆ ಹೈದರಾಬಾದಗೆ ಮರಳಿದರು. ಹದಿನೈದು ಅಗಸ್ಟರಂದು ರಾಮಾನಂದ ತೀರ್ಥರು ಸತ್ಯಾಗ್ರಹ ನಡಸಿ ಜೈಲು ಸೇರಿದರು. ಅವರ ಅನುಯಾಯಿಗಳೆಲ್ಲ ಭೂಗತರಾಗಿ ಕಾರ್ಯನಿರತಾಗಲು ನಿರ್ಧರಿಸಿದರು. ಆದರೆ ಅವರೆಲ್ಲರ ಬಂಧನ ರಾತ್ರಿಯೇ ನಡೆಯಿತು. ಬಂಧಿತರಾಗಿ ರಂಗನಾಥರಾವ ಸಾಯಗಾಂವಕರರು ಚಂಚಲಗೂಡಾ ಜೈಲಿಗೆ ತಳ್ಳಲ್ಪಟ್ಟರು. ಒಂದು ವರ್ಷ ಜೈಲು ವಾಸದ ನಂತರ ಅವರು ಮರಳಿದಾಗ ರಾಷ್ಟ್ರದ ರಾಜಕೀಯ ಚಿತ್ರವೇ ಸಂಪೂರ್ಣ ಬದಲಾಗಿತ್ತು. ಸಧ್ಯದಲ್ಲಿಯೇ ಭಾರತ ಸ್ವತಂತ್ರವಾಗುವದೆಂಬ ವದಂತಿಗಳು ದಟ್ಟವಾಗಿ ಹಬ್ಬಿದ್ದವು. ಆಗ ರಾಮಾನಂದ ತೀರ್ಥರ ಆದೇಶದಂತೆ ಸಾಯಗಾಂವಕರರು ೧೯೪೨ರಲ್ಲಿ ಬೀದರಿಗೆ ಬಂದು ಜಿಲ್ಲಾ ಮಟ್ಟದ ಕಾಂಗ್ರೆಸ್ ಘಟಕ ಸ್ಥಾಪಿಸಿದರು.

೧೫ನೇ ಅಗಸ್ಟ ೧೯೪೭ ರಂದು ಭಾರತವು ಸ್ವತಂತ್ರಗೊಂಡಿತು. ಆದರೆ ಹೈದರಾಬಾದ ನಿಜಾಮ ಮಾತ್ರ ಭಾರತ ಒಕ್ಕೂಟವನ್ನು ಸೇರಲು ಒಪ್ಪಲಿಲ್ಲ. ಅದರಿಂದಾಗಿ ರಜಾಕಾರರ ಗುಂಪು ಸ್ವಚ್ಛಂದವೃತ್ತಿಗಿಳಿದು ಲೂಟಿ, ದೊಂಬಿ, ಮಹಿಳೆಯರ ಮಾನಹಾನಿಗಳ ಚಟುವಟಿಕೆಗಳಲ್ಲಿ ತೊಡಗಿದರು. ೧೯೪೮ ರಲ್ಲಿ ಮಾರಚಾಳಪಳ್ಳಿಯಲ್ಲಿ ಕರ್ನಾಟಕ ಪರಿಷತ್ತಿನ ಸಮಾವೇಶ ನಡೆದು ಅಹಿಂಸಾತ್ಮಕ ಸತ್ಯಾಗ್ರಹದೊಂದಿಗೆ ಕಾಂಗ್ರೆಸ್ ಶಸ್ತ್ರಾಸ್ತ್ರಗಳ ಬಳಕೆಗೂ ಮುಂದಾಗಬೇಕೆಂಬ ಚರ್ಚೆ ನಡೆಯಿತು. ಆ ಚರ್ಚೆ ವಿಫಲವಾಯಿತು. ಆದರೂ ಸಾಯಗಾಂವಕರರ ನೇತೃತ್ವದಲ್ಲಿ ವರಿಷ್ಠರಿಗೆ ತಿಳಿಯದಂತೆ ಶಸ್ತ್ರಾಸ್ತ್ರಗಳ ಬಳಕೆಗೆ ಎಲ್ಲ ವಿಧಗಳ ಕ್ರಮ ಕೈಕೊಳ್ಳಲಾಯಿತು.

ಅದೇ ವರ್ಷ ಅಂದರೆ "೧೯೪೮ರಲ್ಲಿಯೇ ಸಾಯಗಾಂವಕರರನ್ನು ಹಿಡಿದು ಕೊಟ್ಟವರಿಗೆ ನಿಜಾಮ ಸರ್ಕಾರ ಒಂದು ಲಕ್ಷ ರೂಪಾಯಿಗಳ ಬಹುಮಾನ ಘೋಷಿಸಿತು."[೨] ಅಲ್ಲದೆ ಕಂಡಲ್ಲಿ ಗುಂಡಿಕ್ಕುವ ಆದೇಶವನ್ನು ಕೊಟ್ಟಿತು. ಆಗ ಸಾಯಗಾಂವಕರರು ಭೂಗತರಾಗಿ ರಿಯಾಸತ್ತಿನ ಗಡಿ ಪ್ರದೇಶಗಳಲ್ಲಿ ಶಸ್ತ್ರಾಸ್ತ್ರಗಳ ಸಂಗ್ರಹ ಕಾರ್ಯಗಳಲ್ಲಿ ತೊಡಗಿದರು. ಅದರಂತೆ ಯುವಕರಿಗೆ ತರಬೇತಿ ನೀಡುವ ವ್ಯವಸ್ಥೆಯನ್ನು ಮಾಡಿದರು. ಈ ಅವಧಿಯಲ್ಲಿ ಬೀದರಿನ ರಾಜ ಮಾಸ್ತರರ ಸೋದರಿ ಶಕುಂತಲಾ ಚಾಕೂರಕರ ಅವರು ಸಾಯಗಾಂವಕರರಿಗೆ ತುಂಬ ನೆರವಾದರು.

ಶಸ್ತ್ರಾಸ್ತ್ರಗಳ ಸಂಗ್ರಗಣೆಗಾಗಿ ನಾಂದೇಡಿಗೆ ತೆರಳಿದಾಗ ಬಿಲೋಲಿಯಲ್ಲಿ ಅನಿರೀಕ್ಷಿತ ಬಂಧಿಸಲ್ಪಟ್ಟರು. ಆದರೆ ಅಲ್ಲಿಯೇ ಸಬ್ ಇನ್ಸಪೆಕ್ಟರರ ಪತ್ನಿ ಸುಲ್ತಾನಾಳ ಸಹಾಯದಿಂದ ಪಾರಾದರು.

ಸೆಪ್ಟೆಂಬರ ೧೭, ೧೯೪೮ ರಂದು ಹೈದರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನಗೊಂಡಿತು. ಸಾಯಗಾಂವಕರರು ಮುಂದೆ ಕಮ್ಯುನಿಷ್ಟ ಪಕ್ಷಕ್ಕೆ ಸೇರಿ ರಾಜಕೀಯದಿಂದ ದೂರ ಉಳಿದರು.

ಸಾಯಗಾಂವಕರರ ಬದುಕು ಸುಖದ ಸುಪತ್ತಿಗೆಯಂತಿರದೇ ತೀವ್ರ ಹೋರಾಟದ ರಣರಂಗದಂತಿದೆ. ಒಂದು ಮಗುವಿನ ತಂದೆಯಾದ ತರುವಾಯ ಹೆಂಡತಿ ತೀರಿಕೊಂಡಳು. ವಯಸ್ಸಿಗೆ ಬಂದ ಮಗ ಅಕಾಲ ವೃತ್ಯುವಿಗೆ ತುತ್ತಾದಾಗ ಮರು ಮದುವೆಯಾದರೂ ಹೆಂಡತಿಗೆ ಕ್ಯಾನ್ಸರ್‌ರೋಗ ಈಗ ಸಾಯಗಾಂವಕರರು ಮನೆಯ ಆಸ್ತಿಯನ್ನೆಲ್ಲ ಮಾರಾಟ ಮಾಡಿ ಬೀದರ ನಗರದ ಬಾಡಿಗೆ ಮನೆಯೊಂದರಲ್ಲಿ ವಾಸವಾಗಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರ ನೀಡುತ್ತಿರುವ ಮಾಸಾಶನದಲ್ಲಿ ತಮ್ಮ ಬದುಕನ್ನು ಸಾಗಿಸುತ್ತಲಿದ್ದಾರೆ.

### ೧೦) ರಾಮಕೃಷ್ಣರಾವ ಆಣದೂರಕರ:

ರಾಮಕೃಷ್ಣರವರ ಪ್ರಾಥಮಿಕದಿಂದ ಪ್ರೌಢಶಾಲೆಯವರೆಗಿನ ಅಭ್ಯಾಸವು ಮಹಾರಾಷ್ಟ್ರದ ಬೀಡ ಜಿಲ್ಲೆಯ ಅಂಬೆಜೋಗಾಯಿಯಲ್ಲಿ ಮುಗಿಯಿತು. ಸ್ವಾಮಿ ರಾಮಾನಂದ ತೀರ್ಥರು ಸ್ಥಾಪಿಸಿದ ಈ ಸಂಸ್ಥೆಯು ಅನೇಕ ಸ್ವಾತಂತ್ರ್ಯಯಾಗಿದೆ. ೧೯೪೬ ರಲ್ಲಿ ಎಚ್.ಎಸ್.ಸಿ. ಪಾಸದ ಮೇಲೆ ಅವರು ಹೈದರಾಬಾದಿನ ಸಿಟಿ ಕಾಲೇಜಿನಲ್ಲಿ ಇಂಟರದವರೆಗೆ ಅಭ್ಯಾಸ ಮಾಡಿದರು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಿ.ಎಸ್.ಸಿ. ಅಭ್ಯಾಸವನ್ನು ಪೂರ್ಣಗೊಳಿಸಿದರು.

ಏಳನೇ ವರ್ಗದಲ್ಲಿ ಓದುವಾಗಲೇ ೧೯೪೨ರಲ್ಲಿ ಅವರು ಭಾರತ ಬಿಟ್ಟು ತೊಲಗಿರಿ ಚಳುವಳಿಯಲ್ಲಿ ಭಾಗವಹಿಸಿದರು. "ವಂದೇ ಮಾತರಂ." "ಇನ್ಕಿಲಾಬ ಜಿಂದಾಬಾದ್" ೧೩ ಎಂಬ ಘೋಷಣೆಯನ್ನು ಕೂಗುತ್ತ ವರ್ಗ ಬಿಟ್ಟು ಹೊರ ನಡೆದರು. ಪೋಲಿಸರ ವಶದಲ್ಲಿ ಅವರನ್ನು ನಾಲ್ಕು ದಿನ ಇಟ್ಟು ಸಾಕಷ್ಟು ಹೊಡೆದು ಬಡೆದು ಬೈದು ತೊಂದರೆ ಕೊಡಲಾಯಿತು.

ಒಮ್ಮೆ ವರ್ಹಾಡದ ರಾಜಕುಮಾರ (ಪ್ರಿನ್ಸ್ ಆಫ್ ಬಿರಾರ) ಅಂಬೆಜೋಗಾಯಿಯಲ್ಲಿರುವ ಸೈನ್ಯಶಿಬಿರಕ್ಕೆ ಭೇಟಿ ನೀಡುವವರಿದ್ದರು. ಅವರ ಸ್ವಾಗತಕ್ಕಾಗಿ ಅನೇಕ ಕಮಾನುಗಳನ್ನು ನಿರ್ಮಿಸಲಾಗಿತ್ತು. ರಾಮಕೃಷ್ಣರಾವರ ವಿದ್ಯಾರ್ಥಿ ತಂಡವು ನಾಲ್ಕೈದು ಕಮಾನುಗಳನ್ನು ಸುಟ್ಟಿತು. ರಾಮಕೃಷ್ಣರಾವ ಮತ್ತು ಅವರ ಸಂಗಡಿಗರನ್ನು ಬಂಧಿಸಿದ ಪೊಲೀಸರು ಹೊಡೆದು ಬಡೆದು ಅಂಜಿದರು. ಆದರೆ ಅಪ್ರಾಸ್ತ ವಯಸ್ಕರಾದ ಅವರನ್ನು ಬಿಟ್ಟು ಬಿಡುವುದು ಪೋಲಿಸರಿಗೆ ಅನಿವಾರ್ಯವಾಗಿದ್ದಿತು.

೧೯೪೬ ರಲ್ಲಿ ಎಚ್.ಎಸ್.ಸಿ. ಪರೀಕ್ಷೆ ಮುಗಿಸಿದ ಕೂಡಲೇ, ಊರಿಗೆ ಹಿಂದಿರುಗಿ ಬರುವ ಮೊದಲು ಮಹಾರಾಷ್ಟ್ರ ಪರಿಷತ್ತಿನ ಚಟುವಟಿಕೆಗಳಲ್ಲಿ ಪಾಲುಗೊಂಡರು. ಈ ಪರಿಷತ್ತಿನ ಅಧ್ಯಕ್ಷರಾದ ಡಿ.ಜಿ. ಬಿಂದು ಅವರಿಗೆ ರಾಮಕೃಷ್ಣರು ಕಾರ್ಯದರ್ಶಿಯಾಗಿ ಸ್ವಾತಂತ್ರ್ಯ ಹೋರಾಟದ ಪ್ರಚಾರ ಕಾರ್ಯ ಮಾಡಿದರು.

ಇಂಟರ ಅಭ್ಯಾಸಕ್ಕಾಗಿ ರಾಮಕೃಷ್ಣರು ಹೈದರಾಬಾದಕ್ಕೆ ಬಂದ ಮೇಲೆ, ಹೈದರಾಬಾದ ರಾಜ್ಯ ಕ್ರಿಯಾ ಸಮಿತಿಯು ಕಾಲೇಜು ಕೊರ್ಟು , ಕಚೇರಿಗಳಿಗೆ ಶರಣು ಹೊಡೆದು ಅನ್ಯ ವಿದ್ಯಾರ್ಥಿಗಳನ್ನು ಸ್ವಾತಂತ್ರ್ಯ ಹೋರಾಟಕ್ಕೆ ಪ್ರಚೋದಿಸಿದರು. ಹೈದರಾಬಾದ ಸ್ಟೇಟ ಕಾಂಗ್ರೇಸ ಕರೆಯ ಮೇರೆಗೆ ಸತ್ಯಾಗ್ರಹದಲ್ಲಿ ಪಾಲುಗೊಂಡು ೧೦-೦೮-೧೯೪೭ ರಂದು ಬಂಧಿತರಾಗಿ ಚಂಚಲಗೂಡಾ ಸೆರೆಮನೆಯನ್ನು ಸೇರಿದರು. ಎರಡು ತಿಂಗಳ ಶಿಕ್ಷೆಯಾಗಿತ್ತು. ಆದರೆ ೩೦ ದಿನಗಳು ಮುಗಿಯುವಷ್ಟರಲ್ಲಿ ಕಾಂಗ್ರೇಸ್ ಕ್ರಿಯಾ ಸಮಿತಿಯವರು ಅವರನ್ನು ಬಿಡಿಸಿ ಹೊರತಂದರು. ಈ ಸೆರೆಮನೆಯಲ್ಲಿ ಕಾಶಿನಾಥರಾವ ವೈದ್ಯ, ಡಾ॥ ಮೇಲ್ಕೋಟಿ, ಡಿ.ಬಿ. ಕಲ್ಮಣಕರರು ಕಾನಡೆ, ಕುಸುಮಾಕರ ದೇಸಾಯಿ, ಪಾರ್ಡಿಕರ ಮೊದಲಾದವರು ಇವರ ಜೊತೆಯಲ್ಲಿ ಕೈದಿಯಾಗಿದ್ದರು.

ಹೈದರಾಬಾದ ನಗರ ಕಾಂಗ್ರೇಸ್ಸಿನ ಕಾರ್ಯಕರ್ತರಾದ ರಾಮಕೃಷ್ಣರು ಸರೋಜನಿ ನಾಯ್ಡು. ಅಶೋಕ ಮೆಹತಾ, ಅರುಣಾ ಅಸಫ ಅಲಿ, ಸ್ವಾಮಿ ರಾಮಾನಂದ ತೀರ್ಥ ಮೊದಲಾದವರು ನಡೆಸುತ್ತಿದ್ದ, ಸಭೆಗಳಿಗೆ ಕ್ರಿಯಾ ಶೀಲರಾಗಿ ಪಾಲುಗೊಳ್ಳುತ್ತಿದ್ದರು. ಹೋರಾಟದಲ್ಲಿಯ ರಾಮಕೃಷ್ಣರ ನಿಷ್ಠೆಯನ್ನು ಮನಗಂಡ ಹೈದರಾಬಾದ ರಾಜ್ಯ ಕಾಂಗ್ರೇಸ್ ಅವರಿಗೆ ಬೆಂಗಳೂರಿನಿಂದ ಹೈದರಾಬಾದಿಗೆ ಕಳಿಸಿತು. ಸುಮಾರು ನಾಲ್ಕು ತಿಂಗಳು ತರಬೇತಿಯ ನಂತರ ಅವರು ಬೆಂಗಳೂರಿನಿಂದ ಹೈದರಾಬಾದಿಗೆ ದಿನಾಂಕ: ೧೩-೩-೧೯೪೮ ರಿಂದ ಜೂನ್ ೧೯೪೮ರ ಕೊನೆಯವರೆಗೆ ರಾಮಕೃಷ್ಣರು ಹಿಂದಿರಿಗಿದರು. ಹೈದರಾಬಾದಿನ ನಿಜಾಮ ಸರ್ಕಾರವನ್ನು ಅಸ್ಥಿರಗೊಳಿಸಲು, ಮಂತ್ರಿ ಲಾಯಕ್ ಅಲಿಯವರ ಮನೆಯ ತಂತಿ ಸಂಬಂಧವನ್ನು ಕಡಿದು ಹಾಕುವುದು, ರೈಲು ಹಳಿಗಳನ್ನು ಕಿತ್ತುವುದು ಮೊದಲಾದ ಚಟುವಟಿಕೆಗಳಲ್ಲದೆ ಬಡಿಚೌಡಿ ಪೋಲಿಸ್ ಸ್ಟೇಷನ್, ಸೈನಿಕ್ ಪೆಟ್ರೋಲ್ ಡಿಪೊ, ಚಲನ ಚಿತ್ರ ಮಂದಿರ ಮೊದಲಾದವುಗಳ ಮೇಲೆ ಬಾಂಬ ಎಸೆತಗಳ ಯೋಜನೆಗಳನ್ನು ಕಾರ್ಯಗತಗೊಳಿಸುವುದರಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಂಡರು. ಈ ಎಲ್ಲಾ ಕಾರಣಗಳಿಗಾಗಿ ಅವರ ಮೇಲೆ ನಿಜಾಮ ಸರಕಾರವು ಅರಸ್ಟೆ ವಾರಂಟ್ ಹೊರಡಿಸಿತು. ಅವರ ಮನೆ ಶೋಧ ಮಾಡಲಾಯಿತು. ಅವರ ಕುಟುಂಬದ ಸದಸ್ಯರಿಗೆ ಹೀನಾಯವಾಗಿ ಕಿರುಕುಳ ಕೊಡಲಾಯಿತು. ಆದರೆ ರಾಮಕೃಷ್ಣ ಭೂಗತರಾಗಿದ್ದ ಕಾರಣ ಪೋಲಿಸರ ಕೈಗೆ ಸಿಗಲಿಲ್ಲ. ಈ ಚಟುವಟಿಕೆಗಳಲ್ಲಿ ಹೈದ್ರಾಬಾದಿನ ದಾರುಲ ಸಲಾಮ ಮಹ್ಮದಅಲಿ ಜಿನ್ನಾ ಸಭೆ ನಡೆಸುವಾಗ ಜರುಗಿಸಿದ ಬಾಂಬ ಎಸೆತವು -

–ಒಂದಾಗಿತ್ತು. ಆಗ ಮಹ್ಮದಅಲಿ ಜಿನ್ನಾ ಉಳಿದುಕೊಂಡರು. ಈ ಹೋರಾಟದ ಕ್ರೀಯೆಯಲ್ಲಿ ಆರ್. ವಿ. ಬಿಡಪ, ಗುರಪ್ಪಾ ಲಾಡಗೇರಿ, ಬ್ರಿಜಪಾಲ ಸಿಂಗ ಠಾಕೂರ, ಮಾದವರಾವ ಪಾಠಕ್, ರಾಮಚಂದ್ರ ಬಡವೆ ಶಾಮರಾವ ಅಪ್ಸಂಗೆಕರ್, ತಾರಾಪರಾಂಜಪೆ ಮೊದಲಾದವರು ಅವರ ಸಹ ವರ್ತಿಯಾಗಿದ್ದರು.

ಕಾಗ್ರೇಸ್ ಕ್ರಿಯಾ ಸಮೀತಿಯ ಆದೇಶದ ಮೇರೆಗೆ ರಾಮಕೃಷ್ಣರು ಭೂಗತರಾಗಿ ಸೀಮಾಂತ ಹೋರಾಟದಲ್ಲಿ ಸೋಲಾಪೂರಕ್ಕೆ ಹೋದರು. ಆಗ ಅವರ ಬದಲಾದ ಹೆಸರು 'ರಾಜೀವ' ಎಂಬುದಾಗಿತ್ತು. ಗೌಪ್ಯವಾಗಿ ಸುದ್ದಿ ಸಂಗ್ರಹ ಮಾಡಿ ಪತ್ರಿಕೆಗೆ ಪೂರೈಸುವುದೆ ಅವರ ಕೆಲಸವಾಗಿದ್ದಿತ್ತು. ಮರಾಠವಾಡಾ, ಫ್ರೀಡಮ್, ವಿಜನ್, ನ್ಯೂಲೈಫ್, ನಯಿ ಜಿಂದಗಿ ಮೊದಲಾದ ಪತ್ರಿಕೆಗಳಿಗೆ ಅವರು ಮಾಹಿತಿ ಪೂರೈಕೆ ಮಾಡುತ್ತಿದ್ದರು. ಕಾಂಗ್ರೇಸ್ಸಿನ್ ಅದಿವೇಶನದಲ್ಲಿ ಪೋಷಕರಾಗಿಯು ಅವರು ದುಡಿದರು.

ಹೀಗೆ ಬೀದರ ತಾಲ್ಲೂಕಿನ ಹಲವಾರು ಹೋರಾಟಗಾರರು ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ತಮ್ಮ ತನು–ಮನ–ಧನ, ತ್ಯಾಗ ಮತ್ತು ಬಲಿದಾನಗಳಿಂದ ಈ ಚಳವಳಿಯಲ್ಲಿ ಭಾಗವಹಿಸಿ ತಮ್ಮ ಮಹತ್ವವಾದ ಪಾತ್ರವನ್ನು ನಿರ್ವಹಿಸಿದರು.

## ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಮತ್ತು ಏಕೀಕರಣ ಹೋರಾಟಗಾರರು

೦೧) ಅಪ್ಪಾರಾವ ಶೆಟಕಾರ.

೦೨) ಕೆ.ಎಸ್.ರಾಜಮಾಸ್ತರ.

೦೩) ಬಸವಂತರಾಯ ಶೆಟಕಾರ.

೦೪) ಬ್ರಿಜ್‌ಪಾಲಸಿಂಗ್ ಠಾಕೂರ.

೦೫) ಭೀಮಣ್ಣ ಮಜ್ಜಿಗೆ.

೦೬) ಮಹಾಂತಪ್ಪಾ ಮಡಕೆ.

೦೭) ಮಾಣಿಕರಾವ ಪುಲೇಕರ.

೦೮) ಮುರಳಿಧರರಾವ ಕಾಮತಿಕರ.

೦೯) ರಂಗನಾಥ ಸಾಯಗಾಂವಕರ.

೧೦) ರಾಮಕೃಷ್ಣರಾವ ಅಣದೂರ.

೧೧) ಮಾಣಿಕರಾವ ಚೌಧರಿ.

೧೨) ಗುರುಪ್ಪಾ ಲಾಡಗೇರಿ.

೧೩) ವೀರಭದ್ರಪ್ಪಾ ಕವಲಾಸ.

೧೪) ವಿಶ್ವನಾಥರಾವ ತಳಪಳ್ಳಿಕರ.

೧೫) ಶ್ರೀನಿವಾಸರಾವ ಹವಾಲ್ದಾರ.

೧೬) ಗ್ಯಾನರಾವ.

೧೭) ನಾನಾರಾವ ಕುಮಠೇಕರ

೧೮) ಮಾದವ ಗೋಪಾಳ ಪಾಠಕ.

೧೯) ರಾಮಣ್ಣ ಕ್ಯಾಸಾ.

೨೦) ಶ್ರೀನಿವಾಸರಾವ್ ರಾಮರಾವ ಎಖೆಳ್ಳಿಕರ.

# ಅಡಿಟಿಪ್ಪಣಿಗಳು

1. ಸೂರ್ಯನಾಥ ಕಾಮತ್:– ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಪುಟ – 906
2. ವೀರೇಂದ್ರ ಸಿಂಪಿ ಸಂ:– ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು – ಪುಟ 150
3. ಅದೇ ಪು – 154
4. ಅದೇ ಪು – 155
5. ಅದೇ ಪು – 157
6. ಅದೇ ಪು – 160
7. ಅದೇ ಪು – 161
8. ಅದೇ ಪು – 162
9. ಅದೇ ಪು – 165
10. ಅದೇ ಪು – 172
11. ಅದೇ ಪು – 174
12. ಸೂರ್ಯನಾಥ ಕಾಮತ್:– ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಪು – 980
13. ವೀರೇಂದ್ರ ಸಿಂಪಿ ಸಂ:– ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು ಪು – 175

# ಅಧ್ಯಾಯ – ೬

# ಉಪಸಂಹಾರ

ಈ ಕಿರು ಪ್ರಬಂಧದ ವಿಷಯದಲ್ಲಿ ನಡೆಸಿದ ಅನ್ವೇಷಣೆಯ ವಿಶಿಷ್ಠ ಲಕ್ಷಣಗಳು ಅವುಗಳ ಮಹತ್ವ ಹಾಗೂ ಯಥಾಸ್ಥಿತಿಯ ಪುನರಾವಲೋಕನದ ಪ್ರಯತ್ನದ ಈ ಅದ್ಯಾಯದಲ್ಲಿದೆ.

ಸ್ವಾತಂತ್ರ್ಯವೆಂಬುದು ಹೋರಾಟದ ಫಲ. ಗತಿಸಿದ ಸತ್ಯಾಂಶಗಳ ಕ್ರೂಢಿಕರಣ ವೀರಶೂರರ ಹೋರಾಟಗಾರರ ತ್ಯಾಗ ಬಲಿದಾನಗಳ ನೆನಪಿನ ಯುದ್ಧದಕಣ ಹೈದರಾಬಾದ ಸಂಸ್ಥಾನದಲ್ಲಿ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹಾಗೂ ಏಕೀಕರಣಕ್ಕಾಗಿ ನಡೆದ ಚಳುವಳಿಗೆ ವಿಭಿನ್ನವಾದ ಎರಡು ಬಗೆಯ ಕಂಟಕಗಳನ್ನು, ನಿವಾರಿಸಿಕೊಳ್ಳಬೇಕಾಗಿತ್ತು. ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರು ಎದುರಿಸಬೇಕಾದ ತತಕ್ಷಣದ ಕಂಟಕ ಸಂಸ್ಥಾನದಲ್ಲಿದ ಬ್ರಿಟೀಷ ಸರಕಾರದ ಅದೀನದಲ್ಲಿದ. ನಿಜಾಮನು ತನ್ನ ಸಂಸ್ಥಾನದಲ್ಲಿದ. ಬ್ರಿಟೀಷ ವೀರೋಧಿ ಚಟುವಟಿಕೆಗಳ ಬೆಳವಣಿಗೆಯನ್ನು ಹತ್ತಿಕ್ಕಲ್ಲೆ ಬೇಕಾಯಿತು. ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ಬೆಳೆಯಲು ಬಿಟ್ಟರೆ, ಬ್ರಿಟೀಷರು ಭಾರತ ಬಿಟ್ಟು ತೊಲಗಿದ ಮೇಲೆ ಅದು ಎಲ್ಲಿ ತನ್ನ ಆಳ್ವಿಕೆಯನ್ನ ಕಿತ್ತೊಗೆದು ಬಿಡುತ್ತದೆ. ಎಂಬ ಭಯ ನಿಜಾಮನಿಗೆ ಇತ್ತು. ಬೀದರ ತಾಲ್ಲೂಕಿನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ. ಕಾರ್ಯಕರ್ತರೆಲ್ಲರು ರಜಾಕಾರರ. ಮತಾಂಧತೆ ಹಾಗೂ ಕಮನಿಷ್ಟರ ಹಾವಳಿಯಿಂದಾಗಿ ಅಸಹನೀಯವಾದ ಮಾನಸಿಕ ಯಾತನೆ ಎದುರಿಸಬೇಕಾಯಿತು. ಇದು ತಾಲ್ಲೂಕಿನಲ್ಲಿ ಬೇರೂರಿದ್ದ ಕೋಮು ಸ್ವರೂಪವನ್ನು ತೋರಿಸುತ್ತದೆ. ಮುಸ್ಲಿಂ ನಾಗಿದ್ದ, ನಿಜಾಮನು ಸ್ವಾತಂತ್ರ್ಯ ಭಾರತದ ಮಧ್ಯದಲ್ಲಿ ಸ್ವಾತಂತ್ರ್ಯ ಮುಸ್ಲಿಂ ರಾಷ್ಟ್ರದ ಕನಸು ಕಾಣುತ್ತಿದ್ದಾಗ ಅವನ ಸಂಸ್ಥಾನದ ಪ್ರಜೆಗಳು ಬ್ರಿಟೀಷರು ತೊಲಗಿದ ಕೂಡಲೇ ಪ್ರಜಾ ಪ್ರಭೂತ್ವವಾದಿ ಸರಕಾರಕ್ಕಾಗಿ. ಮತ್ತೊಮ್ಮೆ ಹೋರಾಟಕ್ಕೆ ಇಳಿಯುವ ಅನಿವಾರ್ಯತೆ ಬಂದೊದಗಿತು.

ಬೀದರ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಹೋರಾಟದ ಮುಂಚುಣಿಯಲ್ಲಿದ್ದ ನಾಯಕರು ನೀರಿಕ್ಷಿಸಿದ ರೀತಿಯಲ್ಲಿ ಧರ್ಮದ ಹೆಸರಿನಲ್ಲಿ ಹರಿಸಿದ ರಕ್ತದ ಹೊಳೆ ಹಾಗೂ ಹಿಂಸೆಯ ಮಹಾಪೂರದ ನಂತರವೇ ಅಧಿಕಾರದ ವರ್ಗಾವಣೆ ನಡೆಯಿತು. ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯನ್ನು ಸಂಘಟಿಸುತ್ತಿದ್ದ. ಸಾಮಾಜಿಕ ಹಾಗೂ ರಾಜಕೀಯ ಕಾರ್ಯಕರ್ತರು ಎದುರಿಸಬೇಕಾಗಿದ್ದ. ಸಮಸ್ಯೆಯ ಗಂಭೀರತೆಯನ್ನು ಇದು ತೋರಿಸುತ್ತದೆ. ಇವು ಎರಡೂ ಕಾರಣಗಳಿಂದಾಗಿ, ತಾಲ್ಲೂಕಿನಾದ್ಯಂತ ಚಳುವಳಿಯು ಸಾಮೂಹಿಕ ಸಂಘರ್ಷದ ಸ್ವರೂಪ ತಳೆಯಲು ಸುಧಿರ್ಘಕಾಲ ಹಿಡಿಯುತು.

ಎರಡನೇಯ ಮಹಾಯುದ್ಧದನಂತರ ಆರ್ಯ ಸಮಾಜ, ಹಿಂದೂ ಮಹಾಸಭಾ, ನಾಗರಿಕ ಹಕ್ಕುಗಳ ಸಂಘ ಮತ್ತು ರಾಜ್ಯ ಕಾಂಗ್ರೇಸ್ ನಂತಹ ಸಂಸ್ಥೆಗಳು ಬೀದರ ತಾಲ್ಲೂಕಿನಲ್ಲಿ ಹೈದರಾಬಾದ ಸಂಸ್ಥಾನವನ್ನು ಭಾರತದ ಒಕ್ಕೂಟದೊಂದಿಗೆ ವಿಲೀನಗೋಳಿಸಲು ಹಾಗೂ ರಜಾಕಾರರು ಮತ್ತು ನಿಜಾಮರನ್ನು ಎದುರಿಸಲು ಜನರು ತ್ಯಾಗ ಬುದ್ದಿಯಿಂದ ಹಾಗೂ ಕ್ರಿಯಾಶೀಲರಾಗಿರುವಂತೆ ತೊಡಗಿಸುತ್ತಿದ್ದವು. ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರ ನಿರಂತರ ಹೋರಾಟ ಹಾಗೂ ತ್ಯಾಗದಿಂದಾಗಿ, ಶಾಶ್ವತವಾಗಿ ಗುಣಪಡಿಸಲಾಗದಂತಹ ಹುಣ್ಣಿನ ರೂಪದ ಪಾಕಿಸ್ತಾನದಂತ ಇನ್ನೋಂದು ವಿದೇಶಿ ರಾಷ್ಟ್ರ ಉದ್ಭವಿಸುವದು ತಪ್ಪಿತು.

ಹೀಗೆ ಹೈದರಾಬಾದ ಕರ್ನಾಟಕದ ಬೀದರ ತಾಲ್ಲೂಕಿನಲ್ಲಿ ನಡೆದ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿ ಭಾರತದ ಇತರೆ ಭಾಗಗಳಲ್ಲಿ ನಡೆದ ಚಳುವಳಿಗಿಂತ ಯಾವುದೇ ದೃಷ್ಟಿಯಿಂದಲು ಕಡಿಮೆಯಾಗಿರಲಿಲ್ಲ. ಬೀದರ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಚಳುವಳಿಯು ರಾಜಕೀಯ ಮುಕ್ತಿಗೊಳಿಸುವ ಸಲುವಾಗಿ ಹಾಗೂ ವಿಚಿಧ್ರಕಾರಿ ಶಕ್ತಿಯನ್ನು ದಮನ ಮಾಡುವ ಸಲುವಾಗಿ ನಡೆಯಿತು. ಹೈದರಾಬಾದ ಸಂಸ್ಥಾನವು ಈ ಎಲ್ಲದರ ಪರಿಣಾಮವಾಗಿ ಭಾರತದ ಒಕ್ಕೂಟದೊಂದಿಗೆ ಸೇರಿದ ನಂತರ ಬ್ರಿಟೀಷರ ಕಾಲದಿಂದಲೇ ಹರಿದು ಹಂಚಿಹೋಗಿದ್ದ, ಕನ್ನಡಿಗರನ್ನು ಒಂದು ಪ್ರತ್ಯೇಕ ಭೌಗೋಳಿಕ ಪ್ರದೇಶದಡಿ ಒಂದುಗೂಡಿಸುವದು. ಅಂದರೇ ಕರ್ನಾಟಕ ಏಕೀಕರಣವನ್ನು ಸಾಧಿಸುವದು. ಇಲ್ಲಿನ ನಾಯಕರ ಇನ್ನೊಂದು ಮಹತ್ತರ ಅಭಿಲಾಷೆಯಾಗಿತ್ತು. ಈ ದಿಸೆಯಲ್ಲಿ ೧೯೫೬ ರಲ್ಲಿ ನಡೆದ ಭಾಷಾವಾರು ಪ್ರಾಂತ ರಚನೆಯ ಬೆಂಬಲವಾಗಿ ಹೈದರಾಬಾದ ಸಂಸ್ಥಾನವನ್ನು ವಿಭಜಿಸಲು ಚಳುವಳಿಯನ್ನು ಪ್ರಾರಂಭಿಸಲಾಯಿತು. ಈ ತಾಲ್ಲೂಕಿನ ಜನತೆ ಹಾಗೂ ನಾಯಕರು ತೋರಿದ, ತ್ಯಾಗ ಮತ್ತು ಮೆರೆದ ಸಾಹಸಗಳೂ ಭಾರತ ಒಕ್ಕೂಟ ರಚನೆ ಮತ್ತು ಏಕೀಕರಣ ಚಳುವಳಿಯ ಚರಿತ್ರೆಯಲ್ಲಿ ಅವಶ್ಯಕವಾಗಿ ಉಲ್ಲೇಖಿಸಬೇಕಾದ ವಿಶಿಷ್ಟಪೂರ್ಣ ಸಂಗತಿಗಳಾಗಿವೆ.

ಕ್ರೂರ ದಬ್ಬಾಳಿಕೆ ನಿಜಾಮನ ಆಶಿರ್ವಾದದಿಂದ ಕಾರ್ಯ ಪ್ರವೃತ್ತವಾಗಿದ್ದ, ಕೊಮುವಾದಿ ಶಕ್ತಿ ಮತ್ತು ಬ್ರಿಟಿಷ ಸಾಮ್ರಾಜ್ಯಶಾಹಿಗಳೆಲ್ಲವನ್ನು ಎದುರುಹಾಕಿಕೊಂಡು ಸ್ವಾತಂತ್ರ್ಯ ಚಳುವಳಿಯನ್ನು ಸಂಘಟಿಸುವುದು. ಸುಲಭದ ಕೆಲಸವಾಗಿರಲಿಲ್ಲ. ಹೈದರಾಬಾದ ಸಂಸ್ಥಾನದ ಉಳಿದ ಭಾಗಗಳಲ್ಲಿ ಸ್ವಾತಂತ್ರ್ಯ ಹೋರಾಟವು ಅತ್ಯಂತ ಪ್ರಗತಿಪರ ಮತ್ತು ಉದಾರವಾಗಿಯಾಗಿದ್ದ ಅಥವಾ ಬ್ರಿಟೀಷ ಶಕ್ತಿಯ ವಿರುದ್ಧವಾಗಿದ್ದರೆ. ಬೀದರ ತಾಲ್ಲೂಕಿನಲ್ಲಿ ಅದು ನಿಜಾಮನ ಕ್ರೂರ ಆಳ್ವಿಕೆ ಹಾಗೂ ಅಲ್ಪ ಸಂಖ್ಯಾತ ಪ್ರಧಾನ ಸಮೂದಾಯದ ವಿರುದ್ಧವಾಗಿತ್ತು. ಹೈದರಾಬಾದ ಸಂಸ್ಥಾನದ ಯಾವುದೇ ತಾಲ್ಲೂಕಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವಾಗಲಿ ಅಥವಾ ಸಂಘ ಕಟ್ಟಿಕೊಳ್ಳುವ ಹಕ್ಕಗಾಲಿ ಇರಲಿಲ್ಲ. ಮೂಲಭೂತ ಹಕ್ಕುಗಳನ್ನು ನಿಷೇಧಿಸಿದ್ಧರಿಂದ ತಾಲ್ಲೂಕಿನ ಜನರು ಅವುಗಳಿಂದ ವಂಚಿತರಾಗಿದ್ದರು.

ಪ್ರಜೆಗಳಿಗೆ ಆರ್ಥಿಕ ಸ್ವಾತಂತ್ರ್ಯವಿರದ ಈ ನಾಡಿನಲ್ಲಿ ಅಲ್ಪ ಸಂಖ್ಯಾತರು ಬಹು ಸಂಖ್ಯಾತರನ್ನು ಗುಲಾಮರಾಗಿ ಮಾಡಿಕೊಂಡಿದ್ದರು. ಸ್ವಾತಂತ್ರ್ಯ ಪ್ರೇಮಿಗಳ ಹಿತಾಸಕ್ತಿಗಳನ್ನು ಬಲಿಕೊಟ್ಟು ಮುಸ್ಲಿಂ ರಾಷ್ಟ್ರಕಟ್ಟುವ ತಮ್ಮ ಉದ್ದೇಶಕ್ಕೆ ಅನುಗುಣವಾದ ನೀತಿಗಳನ್ನು ನಿಜಾಮ ಹಾಗೂ ಇತ್ತೇಹಾದಗಳು ರೂಪಿಸುತ್ತಿದ್ದವು. ಇಲ್ಲಿನ ಹಿಂದೂಗಳಿಗೆ ನಿಜಾಮನು ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿರಲಿಲ್ಲ. ಭಾರತದ ಒಕ್ಕೂಟದೊಂದಿಗೆ ಹೈದರಾಬಾದ ಸಂಸ್ಥಾನದಲ್ಲಿ ವಿಲೀನಗೊಳ್ಳುವ ಮೊದಲು ರಜಾಕಾರರ ಚಳುವಳಿಯು ಪರಾಕಷ್ಟೆಯಲ್ಲಿದ್ದಾಗ, ಬೀದರ ತಾಲ್ಲೂಕಿನ ಸಾಮಾಜಿಕ ಜೀವನವು ಕೋಮು ಭಾವನೆಯಿಂದ ಮುಳುಗಿಹೋಗಿತ್ತು.

ತಾಲ್ಲೂಕಿನ ಬಹುಪಾಲು ನಾಗರಿಕರು ಅವಮಾನ ಮತ್ತು ದಬ್ಬಾಳಿಕೆ ಎದುರಿಸಬೇಕಾಗಿತ್ತು. ತಿಲಕರ ನವರಾಷ್ಟ್ರಿಯತೆಯ ಪ್ರಭಾವ, ಹರ್ಡೆಕರ ಮಂಜಪ್ಪನವರ ತತ್ವದರ್ಶನ, ಪಂಡಿತ ತಾರಾನಾಥರ ಉದಯ, ಗ್ರಂಥಾಲಯ ಹಾಗೂ ತರುಣ ಸಂಘಗಳ ಸ್ಥಾಪನೆ, ನಿಜಾಮ ಕರ್ನಾಟಕ ಪರಿಷತ್ತು ಹಾಗೂ ಹೈದರಾಬಾದ ಸಂಸ್ಥಾನಗಳ ಸಮಾವೇಶಗಳ ಚಟುವಟಿಕೆಗಳು ರಾಷ್ಟ್ರಿಯ ಪತ್ರಿಕೆಗಳ ಲೇಖನಗಳು ಕಾಸಿಂ ರಜ್ವಯ ನೇತೃತ್ವದಲ್ಲಿ ನಡೆದ ಇಥ್ಥೆಹಾದನ ದಮನಕಾರಿ ಚಟುವಟಿಕೆ ಮಂತಾದವು ಸಾಮ್ರಾಜ್ಯವಾದಿ ಹಾಗೂ ಕೋಮುವಾದಿ ಶಕ್ತಿಗಳ ವಿರುದ್ಧ ಹೋರಾಡಲು ಬೇಕಾಗಿದ್ದ. ರಾಜಕೀಯ ಜಾಗೃತಿ ಮೂಡಿಸುವದರಲ್ಲಿ ಯಶಸ್ವಿಯಾದವು.

ಸ್ವಾತಂತ್ರ್ಯ ಹಾಗೂ ಏಕೀಕರಣ ಚಳುವಳಿಗಳು ನಿಜವಾದ ಅರ್ಥದಲ್ಲಿ ನಿಜಾಮ ಸರಕಾರದ ಕೋಮುವಾದದ ವಿರುದ್ಧದ ಸಂಗ್ರಾಮವೇ ಆಗಿತ್ತು. ಧರ್ಮವನ್ನು ರಕ್ಷಿಸಬೇಕೆಂಬ ಅಂತರಂಗದ ಮಿಡಿತದಿಂದ ರಾಷ್ಟ್ರೀಯ ಭಾವನೆಯು ಜನರ ಮನಸ್ಸಿನಲ್ಲಿ ಮೂಡಿ ಬಂದಿತ್ತು. ತಾಲೂಕಿನ ಶೇ. ೭೦ರಷ್ಟು ಹೋರಾಟಗಾರರು ಆರ್ಯಸಮಾಜದ ಅನುಯಾಯಿಗಳಾಗಿದ್ದರು. ನಿಜಾಮನ ಕೋಮುವಾದಿ ಹಾಗೂ ಸರ್ವಾಧಿಕಾರಿ ಆಳ್ವಿಕೆ ವಿರುದ್ದ ಸಂಘಟಿತ ದ್ವನಿ ಎತ್ತಲೂ ಸ್ವಾತಂತ್ರ್ಯ ಹೋರಾಟಗಾರರಿಗೆ ತರಬೇತಿ ನೀಡುವ ಸಂಸ್ಥೆಯಾಗಿ ಆರ್ಯಸಮಾಜವು ಕೆಲಸ ಮಾಡಿತು. ವಂದೇ ಮಾತರಂ ಚಳುವಳಿಯ ಕಾಲಕ್ಕೆ ತಾಲ್ಲೂಕಿನ ಯುವ ಜನಾಂಗ ಮತ್ತು ಸ್ವಾತಂತ್ರ್ಯ ಹೋರಾಟಗಾರರಿಗೆ ಜಾತ್ಯಾತೀತ ದೃಷ್ಟಿಕೋನ, ರಾಜಕೀಯ ಪ್ರಜ್ಞೆ ಹಾಗೂ ರಾಷ್ಟ್ರೀಯ ಸ್ಫೂರ್ತಿಯನ್ನು ಮೂಡಿಸಿದವರೆಂದರೆ ಅನುಪಮ ಚೈತನ್ಯಮಯಿ ರಮಾನಂದ ತಿರ್ಥರು.

ತಾಲ್ಲೂಕಿನ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ರಜಾಕಾರರು ಕೈಗೊಂಡ ಭಯೋತ್ಪಾದನಾ ಆಳ್ವಿಕೆಯು ಒಂದು ಹೃದಯ ವಿದ್ರಾವಕ ಹಾಗೂ ನಿರ್ಣಾಯಕ ವಿದ್ಯಮಾನವಾಗಿದ್ದು. ಕಾಸಿಂ ರಜ್ವಿಯ ನೇತ್ರತ್ವದಲ್ಲಿ ಬೀದರ ತಾಲ್ಲೂಕಿನ ಪ್ರತಿಯೊಂದು ಗ್ರಾಮಗಳಲ್ಲಿನ

-ಮುಗ್ಧ ಶಾಂತಪ್ರಿಯ ಜನಗಳ ಮೇಲೆ ಹಲವಾರು ವಿಧದ ದೌರ್ಜನ್ಯ ಎಸಗಿದರು. ಈ ರಜಾಕಾರರ ಮತ್ತು ನಿಜಾಮನ ದೌರ್ಜನ್ಯವನ್ನು ನಿಯಂತ್ರಿಸಲು ೧೩ನೇ ಸೆಪ್ಟೆಂಬರ್ ೧೯೪೮ರಂದು ಮೇಜರ್ ಜನರಲ್ ಜೆ.ಎನ್. ಚೌದರಿಯವರ ಅಧಿಪತ್ಯದಲ್ಲಿ ಪೋಲಿಸ್ ಕಾರ್ಯಾಚರಣೆಗೆ ಆಜ್ಞೆ ನೀಡಲಾಯಿತು. ರಾಷ್ಟ್ರೀಯ ಸೇನೆ ಮತ್ತು ಹೈದರಾಬಾದ ಸಂಸ್ಥಾನದ ಮುಕ್ತಿ ಹೋರಾಟಗಾರರ ಫಲವಾಗಿ ಸೆಪ್ಟೆಂಬರ ೧೭ ಮತ್ತು ೧೮ರಂದು ಹೈದರಾಬಾದ ಪಡೆಗಳು ಶರಣಾಗುವುದರೊಂದಿಗೆ ನಿಜಾಮನು ವಿಲೀನದ ಪತ್ರಕ್ಕೆ ಸಹಿ ಹಾಕಿದನು. ಹೀಗೆ ಪೋಲಿಸ್ ಕಾರ್ಯಾಚರಣೆಯ ಹಾಗೂ ಸಂಸ್ಥಾನದ ಮುಕ್ತಿ ಸಂಘರ್ಷಕ್ಕಾಗಿ ಬೀದರ ತಾಲ್ಲೂಕಿನ ಸ್ವಾತಂತ್ರ್ಯ ಕಣ್ಮಣಿಗಳು ತನ್ನದೇ ರೀತಿಯಲ್ಲಿ ಅಳಿಲು ಸೇವೆಯನ್ನು ಸಲ್ಲಿಸುವುದರ ಮೂಲಕ ರಾಜಕೀಯ ಗೊಂದಲ ಕೋಮುವಾದ ಭಯೋತ್ಪಾದನೆಯ ಅವ್ಯವಸ್ಥೆಯ ಪರ್ವ ಕೊನೆಗೊಂಡಿತು.

ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ರಂಗನಾಥರಾವ ಸಾಯಗಾಂವಕರ, ಅಪ್ಪಾರಾವ ಶೆಟಕಾರ, ಕೆ.ಎಸ್.ರಾಜ ಮಾಸ್ತಾರ. ಮುರಳೀಧರರಾವ ಕಾಮತಿಕರ ಮುಂತಾದವರು ತಮ್ಮ ಪ್ರಾಣವನ್ನು ಭಾರತೀಯ ಸೇನಾಪಡೆ ಜೊತೆ ಸೇರಿಕೊಂಡು ಇಡೀ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ತಲೆ ಮರೆಸಿಕೊಂಡು ಅಡಗಿ ಕುಳಿತಿದ್ದ ರಜಾಕಾರರನ್ನು ತೋರಿಸಿ ಅವರ ಬಂಧನಕ್ಕೆ ನೆರವಾದರು.

ನಿಜಾಮನ ಆಳ್ವಿಕೆಯಲ್ಲಿ ಸಂಪೂರ್ಣ ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದ ಕನ್ನಡಿಗರ ಸಾಮಾಜಿಕ ರಾಜಕೀಯ ಹಾಗು ಸಾಂಸ್ಕೃತಿಕ ಪರಂಪರೆಯ ಶ್ರೀಮಂತಿಕೆಯನ್ನು ವೃದ್ಧಿಸುವ ಸಲುವಾಗಿ ನಿರಂತರ ಶಾಂತಿಭದ್ರತೆ ಗಳಿಸುವ ಸಲುವಾಗಿ ಈ ಚಳುವಳಿ ರೂಪ ಗೊಂಡತು. ಎರಡು ಹಂತಗಳಲ್ಲಿ ನಡೆದ ಹೈದರಾಬಾದ ಕರ್ನಾಟಕದ ಏಕೀಕರಣ ಗಾಥೆಯು ತನ್ನದೆಯಾದ ವಿಶಿಷ್ಟ ಲಕ್ಷಣಗಳನ್ನು ಹಾಗೂ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಮೊದಲ ಹಂತವು ಭಾರತೀಯ ಗಣರಾಜ್ಯದ ಏಕೀಕರಣದ ಸಲುವಾಗಿ ಸಂಘಟಿತವಾದರೆ ಎರಡನೇ ಹಂತದ ಚಳುವಳಿಯು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ರಕ್ಷಣೆಗಾಗಿ ಸಂಘಟಿತವಾಯಿತು. ಭಾಷಾವಾರು ಪ್ರಾಂತಗಳು ಮಾತ್ರ ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವದ ದೇಶದ ಸಾಮಾಜಿಕ ಏಕ ರೂಪತೆಯನ್ನು ಸಾದಿಸಲಬಲ್ಲದು ಎಂಬುದರಲ್ಲಿ ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರಿಗೆ ದೃಢವಿಶ್ವಾಸವಿತ್ತು. ಇದರ ತತ್ಪರಿಣಾಮವಾಗಿ ಹಲವಾರು ನಾಯಕರುಗಳ ತ್ಯಾಗ ಬಲಿದಾನದೊಂದಿಗೆ ನವೆಂಬರ ೧ ೧೯೫೬ರಲ್ಲಿ ಮೈಸುರು ರಾಜ್ಯ ಅಸ್ಥಿತ್ವಕ್ಕೆ ಬಂದು ಮುಂದೆ ದೇವರಾಜ ಅರಸರ ಕಾಲಕ್ಕೆ ನವೆಂಬರ ೧ ೧೯೭೩ರಂದು ಕರ್ನಾಟಕವೆಂದು ನಾಮಕರಣ ಗೊಂಡಿತ್ತು.

ಭೌಗೋಳಿಕ ಏಕತೆಯಿಂದ ನಿಜವಾದ ಏಕೀಕರಣವನ್ನು ಸಾದಿಸಲು ಸಾಧ್ಯವಿಲ್ಲ. ಅಂತೆಯೇ ಕವಿಮಹಾಶಯರೊಬ್ಬರು

'ಏಕೀಕರಣವಾಗಿದೆ ಹೊರಗೆ
ಏಕೀಕರಣವಾಗಬೇಕಾಗಿದೆ
ನಮಗೂ ನಿಮಗೂ ಒಳಗೆ....'

ಎಂಬ ಮಾತಗಳನ್ನು ಅವಲೋಕಿಸಿದಾಗ ಯಾವುದೇ ರಾಷ್ಟ್ರದ ಜನತೆ ಬೌಗೋಳಿಕ ಹಾಗೂ ರಾಜಕೀಯ ಏಕತೆಯ ಜೊತೆಗೆ ಭಾವಾನಾತ್ಮಕ ಏಕತೆಯನ್ನು ಸಾಧಿಸುವುದು ಅತಿ ಅವಶ್ಯಕ ವೆನಿಸುತ್ತದೆ.

ಇಷ್ವೇಲ್ಲಾ ಕಷ್ಟ ಕಾರ್ಪಣ್ಯಗಳನ್ನು ಸಹಿಸಿ ದೇಶಕ್ಕಾಗಿ ಪರೋಪಕಾರಕ್ಕಾಗಿ ನಾಡು ನುಡಿಯ ಸಂರಕ್ಷಣೆಗಾಗಿ ಮಡಿದವರದು ಮರಣವಲ್ಲ ಬದಲಾಗಿ ಅದೊಂದು ವೀರ ಮರಣವೆಂದು ಅವರ ಕಾರ್ಯಗಳನ್ನು ಸ್ಮರಿಸುವುದು. ಸಾಹಸ ವಿಜಯದ ಹೊಸ್ತಿಲು ಸೂಚಿಸಿದಂತೆ ಅವರ ಚೆಲ್ಲಿದ ರಕ್ತ ಬರಿ ರಕ್ತವಲ್ಲ ಅದೂ ಭೂತಾಯಿಯ ಮಡಿಲ ಮುಡಿಗೆ ಅರ್ಪಿಸಿದ ರಕ್ತ ತಿಲಕ ಅಂತಹವರನ್ನು ಗುರುತಿಸಿ ಅವರ ಬಗ್ಗೆ ಇತಿಹಾಸ ರಚಿಸುವುದು ಮುಂದಿನ ಪೀಳಿಗೆಗೆ ಅದನ್ನು ತಿಳಿಯ ಪಡಿಸುವ ಮನೋಭಿಲಾಷೆ ಈ ಸಂಶೋಧನೆಯ ಹಿಂದಿದೆ.

ನಾವಿಲ್ಲಿ ರಾಷ್ಟ್ರ ಕವಿ ಕುವೆಂಪುರವರು ಬರೆದ ತಾಯ್ನಾಡಿನ ಹೆಮ್ಮೆಯ ಪದ್ಯವನ್ನು ಗಮನಿಸಬಹದು.

"ಬೀಳಲಿ ಮೈ ನೆತ್ತರು ಕಾರಿ
ಹೋದರೆ ಹೋಗಲಿ ತಲೆ ಹಾರಿ
ತಾಯ್ನಾಡಿನ ಮೇಲ್ಮೆಗೆ ಹೋರಿ
ಸ್ವಾಂತ್ರದ ಸ್ವರ್ಗಕ್ಕೆ ಏರಿ"

ಹೀಗೆ ಸ್ವಾತಂತ್ರ್ಯ ಸ್ವರ್ಗಕ್ಕೆ ಏರಿದವರು ಸ್ವರ್ಗದಲ್ಲಿ ವಿಶ್ರಾಂತಿ ಪಡೆಯುತ್ತಾರೆ. ನಮ್ಮೆದುರಿಗೆ ಅವರಿರದಿದ್ದರು ಅವರು ಮಾಡಿದ ಕಾರ್ಯತ್ಯಾಗ ಅಪ್ರತಿಮ ಬಲಿದಾನ ಅವರುಣ್ಣದೇ ಉಗುಳಿದ ಸ್ವಾತಂತ್ರ್ಯ ಬಿಕ್ಷೆ ನಮ್ಮೆದುರಿಗೆ ಇದೆ. ಅದನ್ನು ರಕ್ಷಿಸಿಕೊಂಡು ಬೆಳಸಿಕೊಂಡು ಹೋಗುವುದು. ಇಂದಿನ ಭಾರತೀಯ ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯವಾಗಿದೆ.

ಹೈದರಾಬಾದ ಸ್ವಾತಂತ್ರ್ಯ ಮತ್ತು ಏಕೀಕರಣ ಹೋರಟ ಕುರಿತು ಬರೆಯಲಾದ ಅನೇಕ ಗ್ರಂಥಗಳಿದ್ದರು ಬೀದರ ತಾಲೂಕಿನ ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯ ಬಗ್ಗೆ ಪ್ರತೇಕ ಗ್ರಂಥಗಳಲ್ಲಿ ಮತ್ತು ಈ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಇಲ್ಲಿಯವರೆಗೆ ಸಮಗ್ರ ಅಧ್ಯಯನ ನಡೆಸುವ ಪ್ರಯತ್ನಗಳು ನಡೆದಿಲ್ಲ ಸುಮಾರು ೨೦ಕ್ಕು ಹೆಚ್ಚು ಜನ ಸ್ವಾತಂತ್ರ್ಯ ಹೋರಾಟಗಾರರನ್ನು ಹೋಂದಿರುವ ಈ ಬೀದರ ತಾಲ್ಲೂಕು ಹೈದರಾಬಾದ ನಿಜಾಮನ ದುರಾಡಳಿತದ ವಿರುದ್ಧ ಪ್ರತಿಭಟನೆ ತೋರಿದ ಇವರು ಸ್ವಾತಂತ್ರ್ಯ ಪ್ರಾಪ್ತಿಯಾಗುವವರೆಗೂ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸುತ್ತಾ ಬಂದಿದ್ದರಿಂದ ಈ ಹೋರಾಟಗಾರರ ಬಗ್ಗೆ ಸಮಗ್ರವಾಗಿ ಸಂಶೋಧನೆ ಮಾಡಿ ಪ್ರಸ್ತುತ ಕಿರು ಪ್ರಭಂಧದಲ್ಲಿ  ಮಂಡಿಸಲಾಗಿದೆ.

# ಶಬ್ದಕೋಶ

| | | |
|---|---|---|
| ೧. | ಅಸಾಫ | ಚಕ್ರವರ್ತಿ ಸಾಲೊಮನ್ ವಜೀರನ ಹೆಸರು |
| ೨. | ದಫ್ತರ್ | ಕಡತ |
| ೩. | ಫರ್ಮಾನ್ | ನಿಜಾಮನ ಆಜ್ಞೆ |
| ೪. | ಫಸಲಿ | ಶಹಾಜಾನನು ಪ್ರಾರಂಭಿಸಿದ ಯುಗ, ನಿಜಾಮನು ಫರ್ಮಾನುಗಳನ್ನು ಫಸಲಿ ಕ್ರಮದಲ್ಲಿ ಹೊರಡಿಸುತ್ತಿದ್ದ. |
| ೫. | ಗಯಾರ ಮೈಘೋಸಾ | ರಕ್ಷಣೆ ನೀಡಲಾಗದು ಎಂಬ ಆಜ್ಞೆ |
| ೬. | ಕಾಫೀರ | ಮುಸ್ಲಿಂ ಪಂಥವನ್ನು ಅನುಸರಿಸದೆ ಇರುವವರು. |
| ೭. | ಕರಾಬೀನು | ಖಡ್ಗ |
| ೮. | ಮಜ್ಲೀಸ್ – ಇಥ್ಥೆಹಾದ | ಮುಸ್ಲಿಮರ ಒಂದು ಸಾಂಸ್ಕೃತಿಕ ಸಂಸ್ಥೆ |
| ೯. | ಉಲ್ ಮುಸ್ಲಿಂಮೀನ್ | ನಿಜಾಮನ ಕೃಪೆಯಲ್ಲಿ ಕಾಸಿಂ ರಜ್ವಿಯ ನೇತೃತ್ವದಲ್ಲಿ ಇದು ಮುಂದೆ ಮತಾಂಧ ಸಂಸ್ಥೆ ಯಾಯಿತು. ಇದರ ಉಗ್ರ ಅನುಯಾಯಿಗಳೇ ರಜಾಕಾರರು. |
| ೧೦. | ಜಂಬೆ | ಬಿಲ್ಲಿನಾಕಾರದ ಉದ್ದವಾದ ಚೂರಿ. |

# ಆದಾರ ಗ್ರಂಥಗಳು

## (ಕನ್ನಡ ಮಾಧ್ಯಮ ಗ್ರಂಥಗಳು)


೧. ಮಾಹಬಲೇಶ್ವರಪ್ಪಾ ಬಿ. ಸಿ. : ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು. ಗುಲಬರ್ಗಾ ವಿಶ್ವವಿದ್ಯಾಲ ಗುಲಬರ್ಗಾ. – ೨೦೦೮

೨. ಶಂಕರ ನಾರಾಯಣರಾವ ಎನ್. ಪಿ : ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು ನವ ಕರ್ನಾಟಕ ಪಬ್ಲಿಕೇಷನ್ಸ್ - ೨೦೦೬

೩. ಬಾಬು ಕೃಷ್ಣಮೂರ್ತಿ (ಸಂಗ್ರಹ) : ೧೮೫೭ರ ಭಾರತ ಸ್ವಾತಂತ್ರ್ಯ ಸಂಗ್ರಾಮ ಶ್ರೀ ಸಮುದ್ಯತಾ ಪ್ರಕಾಷನ್ – ೨೦೦೭

೪. ಬಾಲಚಂದ್ರ ಜಯಶೆಟ್ಟಿ : ಹೈದರಬಾದ ಕರ್ನಾಟಕ ವಿಮೋಚನಾ ಚಳುವಳಿ. ಕನ್ನಡ ಸಾಹಿತ್ಯ ಪರಿಷತ್ತು ಬೀದರ – ೨೦೦೬

೫. ಗೋಪಾಲರಾವ್ ಹೇಜೀಬ : ಹೈದರಬಾದ ಮುಕ್ತಿ ಸಂಘರ್ಷ ರಾಷ್ಟ್ರೋತ್ಥಾನ ಸಾಹಿತ್ಯ ಬೆಂಗಳೂರು – ೨೦೦೧

೬. ಕಾಮತ್ ಸೂರ್ಯನಾಥ : ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ –೨ ಗೀತಾ ಬುಕ್ ಹೌಸ್ ಮೈಸೂರು – ೧೯೭೪

೭. ಕರ್ನಾಟಕ ಶಿಕ್ಷಣ ಇಲಾಖೆ : ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರು (Who's who in freedom straggle in Karnataka) ಕನ್ನಡ ಅನುವಾದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು – ೧೯೭೫

೮. ಕುಲಕರ್ಣಿ ಜಯದೇವ : ಸ್ವಾತಂತ್ರ್ಯ ಯೋಧರ ನೆನಪುಗಳು ವರದರಾಜ ಪ್ರಕಾಶನ್ ಬೆಂಗಳೂರು – ೧೯೮೯

೯. ತ್ರಿಪಾಠಿ ಬಿ. ಎ ಮತ್ತು ಬರ್ನಾಡೆ : ಸ್ವಾತಂತ್ರ್ಯ ಹೋರಾಟ (ಅನುವಾದ ಅನಂತ ರಾಮಯ್ಯಾ) ನ್ಯಾಷನಲ್ ಬುಕ್ ಹೌಸ್ ನವ ದೆಹಲಿ - ೧೯೬೮

೧೦. ದಿವಾಕರ್ ಆರ್. ಆರ್ : ಸತ್ಯಾಗ್ರಹ ಕನ್ನಡ ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು - ೧೯೮೫

೧೧. ಕರ್ನಾಟಕ ಸಾಂಸ್ಕೃತಿಕ ಪರಂಪರೆ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೦೭

೧೨. ಕಾಮತ್ ಸೂರ್ಯನಾಥ ಮತ್ತು ದಾನಿ ಸುರೇಂದ್ರ : ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು ಹುಬ್ಬಳ್ಳಿ (ಮಿಂಚಿನ ಬಳ್ಳಿ ಗ್ರಂಥ ಬಂಡಾರ – ೧೯೮೮)

೧೩. ಕೃಷ್ಣ ಸ್ವಾ ಮಿ : ಕರ್ನಾಟಕ ಇತಿಹಾಸ ದರ್ಶನ (ಸಂಪುಟ ೧ ಬೆಂಗಳೂರು – ೧೯೯೦

೧೪. ಮಜುಮದಾರ ಆರ್. ಸಿ : ಸ್ವಾತಂತ್ರ್ಯ ಚಳುವಳಿಯ ಇತಿಹಾಸ ಸಾಹಿತ್ಯ ಪ್ರಕಾಶನ್ ಬೆಂಗಳೂರು – ೧೯೮೨

೧೫. ಶಿತ್ರಿ ಸರೋಜನಿ : ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಪಾತ್ರ ಪ್ರಸಾರಂಬ ಕ.ವಿ.ವಿ. ದಾರವಾಡ – ೧೯೮೬

೧೬. ಜಗನ್ನಾಥ ಹೆಬ್ಬಾಳೆ ಸಂ. : ಬೀದರ ಜಿಲ್ಲಾ ದರ್ಶನ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೀದರ – ೧೯೯೭

೧೭. ವೀರೇಂದ್ರ ಸಿಂಪಿ : ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು ಬೀದರ ಜಿಲ್ಲಾ ಆಡಳಿತ ಬೀದರ – ೧೯೯೯

೧೮. ಸಿದ್ರಾಮಪ್ಪ ಮಾಸಿ ಮಾಡೆ : ಬೀದರ ತಾಲೂಕಾ ಪರಿಚಯ. ೨ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಬಿಡುಗಡೆ

೧೯. ಪಾಟೀಲ್ ಪುಟ್ಟಪ್ಪ : ನನ್ನದು ಕನ್ನಡ ನಾಡು. ಕ.ವಿ.ವಿ. ಧಾರವಾಡ – ೧೯೫೭

೨೦. ಪಾಟೀಲ್ ಎನ್. ಎ : ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಉದಯ ಧಾರವಾಡ – ೧೯೭೬

## ENGLISH BOOK'S


1. Halappa G. S : History of the freedom moment in Karnataka Vol No. 1&2 Mysore Govt. Publications, Mysore
2. Desai P. B. : History of Karnataka Kannada Research institute, Dharwad – 1970
3. Azad Moulana Abdul Kalam : India wins freedom Orient Longman, publication – 1970
4. Majumadar R. C. : History of freedom in India Union Publication, Vol No. 1, 2 Calcutta – 1963
5. Tirth Swami Ramananda : Memories of Hyderabad Freedom struggle, Bombay, -1967
6. Vandemataram Ramchandra Rao : Police Action on Hyderabad state – 1970

# ಬೀದರ ತಾಲ್ಲೂಕ ನಕಾಶೆ



# ಸ್ವಾತಂತ್ರ್ಯ ಮತ್ತು ಏಕೀಕರಣದ ಹೋರಾಟಗಾರರು


ನಾನಾನಾರವ ಕುಮತೇಕರ


ರಂಗನಾಥರಾವ
ಸಾಯಗಾಂವಕರ


ರಾಮಕೃಷ್ಣ ಆಣದೂರಕರ


ಮುರಳಿಧರರಾವ ಕಾಮತೀಕರ


ಭೀಮಣ್ಣ ಮಜ್ಜಿಗೆ


ಬ್ರಿಜಪಾಲಸಿಂಗ ಠಾಕೂರ


ಬಸವಂತರಾವ ಶೆಟಕಾರ


ಗುರಪ್ಪ ಲಾಡಗೇರಿ


ವೀರಭದ್ರಪ್ಪ ಕೌಲಾಸ